ಕಾಯಕವೇ ಕೈಲಾಸ



# ಸಿದ್ಧಗಂಗಾ



ಸಂಪುಟ : ೪೪ ಡಿಸೆಂಬರ್ ೨೦೦೮ ಸಂಚಿಕೆ : ೧೨




ಕರ್ನಾಟಕ ವೀರಶೈವ ವಿದ್ಯಾಭಿವೃದ್ಧಿ ಸಂಸ್ಥೆಯುವರು ಬೆಂಗಳೂರಿನಲ್ಲಿ ಏರ್ಪಡಿಸಿದ್ದ ಪೂಜ್ಯ ಶ್ರೀಗಳವರ ಗುರುವಂದನೆ ಹಾಗೂ ಮುಖ್ಯಮಂತ್ರಿಗಳಿಗೆ ಸನ್ಮಾನ ಸಮಾರಂಭದಲ್ಲಿ ಪೂಜ್ಯ ಶ್ರೀಗಳವರು ಆಶೀರ್ವಚನ ನೀಡುತ್ತಿರುವುದು. ವೇದಿಕೆಯಲ್ಲಿ ಶ್ರೀ ಬಿ.ಎಸ್. ಯಡಿಯೂರಪ್ಪ, ಸಂಸದ ಶ್ರೀ ಆನಂತಕುಮಾರ್, ಸಚಿವ ಶ್ರೀ ಉದಾಸಿ, ವಿಧಾನ ಪರಿಷತ್ ಸಭಾಪತಿ ಶ್ರೀ ವೀರಣ್ಣ ಮತ್ತಿಕಟ್ಟೆ, ಶಾಸಕ ಶ್ರೀ ವಿ. ಸೋಮಣ್ಣ, ಕೆ.ವಿ.ವಿ.ಎಸ್. ಸಂಸ್ಥೆಯ ಅಧ್ಯಕ್ಷ ಶ್ರೀ ಬಿ.ಎಸ್. ಪರಮಶಿವಯ್ಯ ಮೊದಲಾದ ಗಣ್ಯರು ಉಪಸ್ಥಿತರಿದ್ದರು



ಪುಟ್ಟಪರ್ತಿಯಲ್ಲಿ ನವೆಂಬರ್ ೧೭ ರಂದು ಏರ್ಪಡಿಸಿದ್ದ ಸಮಾರಂಭದಲ್ಲಿ ಪೂಜ್ಯ ಶ್ರೀಗಳವರೊಂದಿಗೆ ಪೂಜ್ಯ ಶ್ರೀ ಸಾಯಿಬಾಬಾ ಅವರು




ಚಿಕ್ಕತೊಟ್ಲುಕೆರೆಯಲ್ಲಿ ಏರ್ಪಡಿಸಿದ್ದ ಅಟವೀ ಶ್ರೀಗಳವರ ಅಷ್ಟೋತ್ತರ ಶತಮಾನೋತ್ಸವ ಹಾಗೂ ಶ್ರೀಗಳವರ ಗುರುವಂದನೆ ಕಾರ್ಯಕ್ರಮವನ್ನು ಪೂಜ್ಯ ಶ್ರೀಗಳವರು ಉದ್ಘಾಟಿಸಿದರು. ವೇದಿಕೆಯಲ್ಲಿ ಶ್ರೀ ಅಟವೀ ಶಿವಲಿಂಗಸ್ವಾಮಿಗಳು, ಸುತ್ತೂರು ಶ್ರೀಗಳವರು, ಶ್ರೀ ಎಸ್.ಎಂ. ಕೃಷ್ಣ, ಡಾ. ಜಿ. ಪರಮೇಶ್ವರ, ಡಾ. ಸಿ. ಸೋಮಶೇಖರ್ ಮೊದಲಾದವರು



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

**ಆವಾವ ಕಾಯಕವ ಮಾಡಿದರು ಬಸವೇಶ**
**ಆವಗಂ ಶರಣರನು ಸೇವಿಸೆನು ಬಸವೇಶ**

# ಸಿದ್ಧಗಂಗಾ


ಸಂಪುಟ : ೪೪ ಡಿಸೆಂಬರ್ ೨೦೦೮ ಸಂಚಿಕೆ : ೧೨


## ಒಳಪುಟಗಳಲ್ಲಿ ......................




ಚಂದಾ ವಿವರ : ವಾರ್ಷಿಕ ಚಂದಾ ರೂ. ೧೨೦/-
ಆಜೀವ ಸದಸ್ಯತ್ವ ರೂ. ೧೦೦೦/- ಬಿಡಿ ಪ್ರತಿ ರೂ. ೧೦.೦೦

ಸಂಪಾದಕ :
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ :
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ :
ಎಂ. ರೇಣುಕಾರಾಧ್ಯ

ಪ್ರಕಾಶಕರು:
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104.

ಮುದ್ರಕರು:
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ
ಆಫ್‌ಸೆಟ್ ಮುದ್ರಣಾಲಯ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು -572 104.

ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104


ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ

ॐ

## ಶ್ರೀ ಸಿದ್ಧಲಿಂಗೇಶ್ವರ ವಚನ

*ಕರಿಯ ಮಹೀಶನಿಗೊಂದು ಅರಿದ ತಲೆಹುಟ್ಟಿ*
*ಧರೆಯಾಕಾಶವನಾರಡಿಗೊಂಡಿತ್ತಯ್ಯ*
*ಅರಿದ ತಲೆಯಲ್ಲಿ ಉರಿ ಹುಟ್ಟಲಾಗಿ*
*ಶಿರಬೆಂದು ಕರಿಯ ಮಹೀಶನು ಅಳಿದು*
*ಧರೆಯಾಕಾಶವ ಬೆರಸಿ*
*ಚಿದಾಕಾಶಮಯವಾಯಿತೆಂಬೆನಯ್ಯಾ*
*ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.*

ಅಷ್ಟಮದಂಗಳ ವ್ಯಾಪಾರದಿಂದ ಜ್ಞಾನಸ್ವರೂಪನಾದ ಜೀವನೆಂಬ ರಕ್ತಾಂಬಕನಿಗೆ, ಸುಜ್ಞಾನದಿಂದ ತಿರಸ್ಕರಿಸಲ್ಪಟ್ಟ ವೃತ್ತಿ ಜ್ಞಾನವೆಂಬ ಶಿರಸ್ಸುದಯವಾಗಿ, ಭೂಮ್ಯಾಕಾಶಮಧ್ಯದಲ್ಲಿ ಚರಿಸುವಾತ್ಮರುಗಳ ಮುಕ್ತಿಫಲಕ್ಕೆ ವೈರಿಯಾಗಿರ್ಪುದು. ಆ ಜೀವನ ವೃತ್ತಿಜ್ಞಾನವೆಂಬ ಶಿರಸ್ಸಿನಲ್ಲಿ ಶಿವಜ್ಞಾನಾಗ್ನಿ ಉದಯವಾಗಲಾಗಿ, ಅಜ್ಞಾನವೆಂಬ ಶಿರಸ್ಸು ದಹನವಾಗಿ, ಜೀವನ ಜೀವಭಾವವಳಿದು, ದೇಹಭಾವವು ವ್ಯಾಪಕಸ್ವರೂಪವಾದ ಪರಮಾತ್ಮನೆಯಾದಲ್ಲಿ ಜ್ಞಾನಾಕಾಶ ಸ್ವರೂಪವಾದುದು.

(ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರಶಿವಯೋಗಿಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನಸಾರಾಮೃತದ ಬೆಡಗಿನ ವಚನದ ಟೀಕೆ – ವೀರಶೈವ ಅಧ್ಯಯನ ಸಂಸ್ಥೆ– ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ – ಡಂಬಳ– ಗದಗ)

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಬೇಡುವೆ ನಾನಿಮ್ಮ ಮನದ ಮೈಲಿಗೆ ಕಳೆಯೆ
ಕಾಡುವೆ ನಾ ನಿಮ್ಮ ಒಲವಿಗೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅಷ್ಟವಿಧಾರ್ಚನೆ ಇಷ್ಟಲಿಂಗಕೆ ಸಲಿಪ
ಶ್ರೇಷ್ಠ ಸದ್ಗುರು-ವರ ಜಂಗಮವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸಾವಿಲ್ಲ ಶರಣರಿಗೆ ಸಾವನರಿಯರವರು
ಸಾವೆಂಬುದು ಸಯವಲ್ಲವೆನುತಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮನದೊಡೆಯನಾಗಿರುವೆ ಮನವ ಮಡಿಮಾಡಿರುವೆ
ಮನವನನುಗೊಳಿಸಿ ಅರಳಿಸುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸಾವಿಲ್ಲದ ಕೇಡಿಲ್ಲದ ಪರಮಪಾವನರೂಪಿ
ಪೃಥುವಿಗಗ್ಗಳದ ಕಡು ಚೆಲುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಒಡೆಯನೀನಿರುವಾಗ ಕೇಡೆನಗೆ-ಬಹುದೇಗೆ
ಅಡಿಗಡಿಗೆ ಕೈ ಹಿಡಿದು ನಡೆಸಿಹೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮಾತಾಡಲು ಕಲಿಸಿದೆ ಮಾತನಾಲಿಸಿ ನಲಿದೆ
ಮಾತು ಮನದ ಲಿಂಗವೆನಿಸಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬೇಡೆನು ನಾನೇನು ಬೇಸರ ಪಡಬೇಡ
ಬೇಡದಂತಿರಿಸಿ ನೀನಡೆಸು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬದುಕಿದೆನು ನಿಮ್ಮಿಂದ ಬಾಳಿದೆನು ನಿಮ್ಮಿಂದ
ಭವಭಾವಸಾಗರವನೀಸುವೆನು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮಾಯವಿಲ್ಲದಕಾಯ ಮೋಹವಿಲ್ಲದ ಮನ
ಕರ್ತಾರನ ಕಮ್ಮಟಗಶಿವನಾಣ್ಯ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ





## ದೀರ್ಘಾಯುಷ್ಯದ ರಹಸ್ಯ

*ಶಿವನ ಕೃಪೆಯಿಂದ ನಮಗೀಗ ನೂರೊಂದು ವರ್ಷಗಳು ನಡೆದಿವೆ. ಅನೇಕರು ನಮ್ಮನ್ನು ವಿನಮ್ರತೆಯಿಂದ ಕೇಳುತ್ತಿದ್ದಾರೆ. 'ನಿಮ್ಮ ದೀರ್ಘಾಯುಷ್ಯದ ರಹಸ್ಯವೇನು?' ಎಂಬುದಾಗಿ.* ರಹಸ್ಯವೇನಿಲ್ಲ ಎಲ್ಲವೂ ಸಹಜವಾಗಿಯೇ ಇದೆ. ಆಹಾರದಲ್ಲಿ ಮಿತಿಯಿದೆ. ನೇಮ ನಿಷ್ಠೆಯಿದೆ. ಸಾತ್ವಿಕಾಹಾರ ಮಾತ್ರವಾಗಿದೆ. ಯಾವುದರಲ್ಲೂ ಅತಿಯೆಂಬುದಿಲ್ಲ. ಪ್ರಸಾದದಲ್ಲಿ ರುಚಿಬಯಸುವುದಿಲ್ಲ. ಬಾಯ ಸವಿಗೆಂದೂ ಅಪೇಕ್ಷಿಸಿದ್ದಿಲ್ಲ. ಪ್ರಸಾದ ಸಲ್ಲಿಸುವಾಗ ಪ್ರಸನ್ನತೆಯನ್ನು ಅನುಭವಿಸುತ್ತೇವೆ. ಉದ್ವೇಗ ಮನ ಮುಕ್ತತೆಯನ್ನು ಕಾಪಾಡಿಕೊಳ್ಳಲಾಗುತ್ತದೆ. ಮೌನದಲುಂಬುವುದಿಲ್ಲ. ತುತ್ತಿಗೊಮ್ಮೆ ಶಿವಶರಣೆನ್ನುವ ಬಸವವಾಣಿಯನ್ನು ನೆನೆಯುತ್ತಿರುತ್ತೇವೆ. ಸಹಪಂಕ್ತಿಯಲ್ಲಿರುವವರ ಪ್ರಸಾದ ತೃಪ್ತಿಯತ್ತ ಲಕ್ಷ್ಯ ಕೊಡುತ್ತೇವೆ. ಘನಪ್ರಸಾದವೂ ಅಲ್ಪ ಪ್ರಮಾಣ, ದ್ರವ ಪ್ರಸಾದವೂ ಅಲ್ಪ. ಹಣ್ಣು ಸ್ವಲ್ಪ.

ಗ್ರಂಥಾವಲೋಕನದಿಂದೆಂದೂ ದೂರವಾಗಿಲ್ಲ. ಬಿಡುವು ದೊರೆತಾಗಲೆಲ್ಲ ಮಹಾನುಭಾವರ ಗ್ರಂಥಾಧ್ಯಯನದಲ್ಲಿ ತೊಡಗಿರುತ್ತೇವೆ. ಒಂದಲ್ಲ ಒಂದು ಕಾಯಕದಲ್ಲಿ ಮನಸ್ಸನ್ನು ಲೀನಗೊಳಿಸಿಕೊಳ್ಳುತ್ತೇವೆ. ನಿದ್ರೆಗೆ ಜಾರುವಾಗಲೂ ಕಾಯಕದ್ದೇ ಧ್ಯಾನ. ಪ್ರವಾಸದಲ್ಲಿದ್ದಾಗ ನಿಸರ್ಗದತ್ತ, ನಿಸರ್ಗದ ವಿಸ್ಮಯಗಳತ್ತ ಕಣ್ಣಾಡಿಸುತ್ತ, ವಿಸ್ಮಯಗೊಳ್ಳುತ್ತೇವೆ. ಹರಿವ ನದಿಗಳನ್ನು, ಹಾರುವ ಹಕ್ಕಿಗಳನ್ನು, ಅರಳುವ ಹೂಗಳನ್ನು, ಉದಯಿಸುವ ಸೂರ್ಯನನ್ನು ನೋಡಿ ಮುದ ಗೊಳ್ಳುತ್ತೇವೆ. ಶ್ರೀಮಠದಲ್ಲಿರುವ ಎಳೆಯ ಮಕ್ಕಳ ನಗುವನ್ನು, ಆಟಪಾಠ ಗಳನ್ನು ಕಂಡು ಆನಂದಿಸುತ್ತೇವೆ. 'ಒಡವೆಯನ್ನು ಒಡಯರಿಗೊಪ್ಪಿಸುವುದೇ ನೇಮ'ವೆಂಬ ಭಾವಶುದ್ಧಿಯಿಂದ ನಡೆದಿದ್ದೇವೆ. ಗುರುಸ್ಮರಣೆಯಲ್ಲಿ ಕ್ಷಣ ಕ್ಷಣಾರ್ಧವೂ ಆಯುಷ್ಯರಾಶಿಯನ್ನು ದರ್ಶಿಸುತ್ತಿದ್ದೇವೆ.

*

'೨೦೦೮ ಸರಿಯುತ್ತಿದೆ. ಹನ್ನೆರಡು ತಿಂಗಳಲ್ಲಿ ರಾಜ್ಯ ರಾಜಕಾರಣದಲ್ಲಿ ಬದಲಾವಣೆಗಳಾದುವು. ಸಮಿಶ್ರ ಸರ್ಕಾರ ಹೋಗಿ ಬಿ.ಜೆ.ಪಿ. ಸರ್ಕಾರ ಅಸ್ತಿತ್ವಕ್ಕೆ ಬಂದಿದೆ. ಉಪಚುನಾವಣೆಗಳು ಮುಂದಿವೆ. ಆಳುವ-ವಿರೋಧ ಪಕ್ಷಗಳ ನಡುವೆ ನಡೆದಿದೆ. ಆರೋಪ-ಪ್ರತ್ಯಾರೋಪ. ಆದರೆ ಅವುಗಳ ವಸ್ತುಸ್ಥಿತಿಯನ್ನು ಅವಲೋಕಿಸಿದಾಗ ನಮ್ಮ ಜನನಾಯಕರ ಸ್ಥಾನಮಾನಗಳ ಗೌರವವೇನಾಗುತ್ತಿದೆ? ಎಂಬ ಪ್ರಶ್ನೆ ಎದುರಾಗುತ್ತದೆ. ವೈಯಕ್ತಿಕ ನೆಲೆಯಲ್ಲಿ ನಿಂತು ಚಿಂತಿಸುತ್ತಿದ್ದಾರಲ್ಲವೆ ? ಎನಿಸುತ್ತದೆ. ಜನಕಲ್ಯಾಣ ಯಾರಿಗೆ ಬೇಕಾಗಿದೆ ? ಇರುವಷ್ಟರಲ್ಲಿ ತನಗೆಷ್ಟನ್ನು ದುಂಡಗೆ ಮಾಡಿ ಕೊಳ್ಳಬಹುದು ಎಂಬುದೇ ನಿತ್ಯ ಜಪವಾಗಿ ಬಿಟ್ಟಿದೆ. ಇದರ ಜೊತೆಗೆ ಜಾತಿ ಭೂತಾರಾಧನೆಯೇ ವಿಜೃಂಭಿಸಿದೆ. ಎಲ್ಲರೂ ಎಲ್ಲ ವೇದಿಕೆಗಳಿಂದಲೂ ಜಾತ್ಯಾತೀತ ಮಾತಿನ ಮಲ್ಲರೇ ಆಗಿ ಬಿಟ್ಟಿದ್ದಾರೆ. ಆದರೆ 'ಒಳಗಾಗುವ ಕೃತ್ಯವ' ಶ್ರೀಸಾಮಾನ್ಯನೇನು ಬಲ್ಲ ? ಯಾರತ್ತ ಬೆರಳು ಮಾಡುವುದು. ಇದ್ದದ್ದರಲ್ಲಿ ಕಡಿಮೆ ಕಳ್ಳನಾರು ? ಎಂಬಂತಾಗಿ ಬಿಟ್ಟಿದೆ.

ಇನ್ನು,

ಭಯೋತ್ಪಾದಕರ ಆಟಾಟೋಪ. ಮುಂಬೈಯಲ್ಲಿ ನಡೆದ ಮಾರಣಹೋಮ. ಉಗ್ರರ ದುರ್ಮನೋ ವಿಕಾರಕ್ಕೆ ಸಿಕ್ಕಿ ಸಾವಿಗೆ ಶರಣಾದ ಅಮಾಯಕರು, ವಿದೇಶಿಯರು. ರಾಕ್ಷಸರು ಇವರಿಗಿನ್ನ ಶ್ರೇಷ್ಠರಿದ್ದರೇನೋ ಧರ್ಮವನ್ನು ಅಫೀಮು ಎಂದುಕೊಂಡವರು. ಯಾವುದೇ ಧರ್ಮ ಹಿಂಸೆಯನ್ನು ಪ್ರತಿಪಾದಿಸದು, ಪೋಷಿಸದು. ಹಾಗೆ ಮಾಡಿದರೆ ಅದು ಧರ್ಮವಾಗಲಾರದು. ಸಮಾಜ ನಿಷ್ಕ್ರಿಯವಾಗಬಾರದು. ಇಕ್ಕಟ್ಟು ಬಿಕ್ಕಟ್ಟಿನ ಸಂದರ್ಭಗಳಲ್ಲಿ ಕೈಕಟ್ಟಿ ಕುಳಿತುಕೊಳ್ಳ ಬಾರದು. ಮುಂಬೈಯಲ್ಲಿ ನಮ್ಮವರು ತೋರಿದ ಸಾಹಸ ಅಭಿನಂದನೀಯ. ಎಲ್ಲ ಭಾರತೀಯರು ಆ ನಿರ್ಭೀತ ಸಾಹಸಿಗಳನ್ನು ಎರಡು ಮಾತಿಲ್ಲದೆ ಅಭಿನಂದಿಸಲೇಬೇಕು. ಸರ್ಕಾರ ಸೂಕ್ತ ರೀತಿಯಲ್ಲಿ ಅವರನ್ನು ಸನ್ಮಾನಿಸಬೇಕು. ಜನಮನದಲ್ಲಿ ರಕ್ಷಿಸುವವರಿದ್ದಾರೆ ಎಂಬ ಭಾವನೆ ಬರುವಂತೆ ಮುನ್ನೆಚ್ಚರಿಕೆ ಕ್ರಮಗಳತ್ತ ಗಮನ ಕೊಡುವುದಾಗಬೇಕು. ನೆಮ್ಮದಿಯಿಂದ ಉಸಿರಾಡುವಂತಾಗಬೇಕು. ಮುಂಬಯಿಯಾಯಿತು ಮುಂದಿನ ಸರತಿ ಬೆಂಗಳೂರು ಎಂಬ ಗುಪ್ತವಾರ್ತೆಯಿರುವುದರ ಬಗ್ಗೆ ರಾಜ್ಯ ಸರ್ಕಾರ ಮೈಯೆಲ್ಲ ಕಣ್ಣಾಗಿ ಎದ್ದು ನಿಲ್ಲುವ ಸಂಕಲ್ಪ ಮಾಡಿರುವುದು ಸೂಕ್ತವಾದುದಾಗಿದೆ. ಆಚರಣೆಯತ್ತ ಧಾವಿಸುವಂತಾಗಲಿ. ೨೦೦೯ಕ್ಕೆ ಸ್ವಾಗತ ಬಯಸುತ್ತೇವೆ.

– ಸಂಪಾದಕ





# ಪ್ರಾರ್ಥನೆಯ ವೈಜ್ಞಾನಿಕತೆ

ಪ್ರಾರ್ಥನೆಯಲ್ಲಿ ತುಂಬ ಉತ್ತಮವಾಗಿ ಪ್ರಭಾವ ಬೀರಬಲ್ಲ ಚಿಕಿತ್ಸಕ ಶಕ್ತಿಯಿದೆ ಎಂದು ಹಲವು ಅಧ್ಯಯನಗಳು ಹೇಳಿವೆ. ಪ್ರಾರ್ಥಿಸುವುದರ ಮೂಲಕ ನಮ್ಮ ಅಪೇಕ್ಷಿತ ಉದ್ದೇಶಗಳನ್ನು ಪೂರೈಸಬಲ್ಲ ಪ್ರಕೃತಿಯ ಶಕ್ತಿಗಳನ್ನು ಆಕರ್ಷಿಸಲು ಸಾಧ್ಯವಿದೆ.

ಪ್ರಾರ್ಥನೆಯು ಒಂದು ಅತ್ಯುತ್ತಮ ಔಷಧಿಯಾಗಬಲ್ಲದು ಎಂಬುದನ್ನು ಈಗೀಗ ವಿಜ್ಞಾನವು ಸಹ ನಂಬಲಾರಂಭಿಸಿದೆ. ಇತ್ತೀಚಿನ ಒಂದು ಸಂಶೋಧನೆಯು 'ನಿಮಗೆ ಆರೋಗ್ಯಕರ ಹಾಗೂ ಸಂತೃಪ್ತಿ ಬದುಕು ಬೇಕೆಂದಾದಲ್ಲಿ, ಯಾವುದಾದರೂ ಆಧ್ಯಾತ್ಮಿಕ ಕೇಂದ್ರಕ್ಕೆ ಹೋಗಿ ಅಲ್ಲಿ ಪ್ರಾರ್ಥಿಸುವುದನ್ನು ರೂಢಿಸಿ ಕೊಂಡು ಲಾಭ ಪಡೆದುಕೊಳ್ಳಿ' ಎಂದು ಹೇಳಿದೆ.

ಈಗ ವಿಜ್ಞಾನಿಗಳು ಭಗವಂತನೆಂದರೆ ಏನು ಎಂಬುದನ್ನು ಕಂಡುಹಿಡಿಯುವ ಪ್ರಯತ್ನದಲ್ಲಿ ತೊಡಗಿದ್ದಾರೆ. ವಿಶ್ವದಾದ್ಯಂತ ಪ್ರಮುಖ ವೈದ್ಯಕೀಯ ಸಂಸ್ಥೆಗಳು ಸಹ ರೋಗಿಗಳ ಸ್ವಂತದ ಆಧ್ಯಾತ್ಮಿಕ ನಂಬಿಕೆಗಳನ್ನು, ಹೈಟೆಕ್ ವೈದ್ಯಕೀಯ ಚಿಕಿತ್ಸೆಯ ಜತೆಗೂಡಿಸಬಹುದಾದಂತಹ ಪ್ರಭಾವೀ ಹಾಗೂ ಅತ್ಯಂತ ನೈತಿಕವೂ ಆಗಿರುವ ವಿಧಾನಗಳ ಶೋಧನೆಯನ್ನು ಆರಂಭಿಸಿವೆ.

ಪ್ರಾರ್ಥನೆಯು ನಮ್ಮ ಮನಸ್ಸು, ನಮ್ಮ ವ್ಯಕ್ತಿತ್ವ, ನಮ್ಮ ತಿಳುವಳಿಕೆ ಮತ್ತು ನಮ್ಮ ಸತ್ತ್ವ ಇವುಗಳನ್ನು ನಮ್ಮೊಳಗಿನ ಭಗವಂತ ಅಥವಾ ಅಂತರಾತ್ಮನೊಂದಿಗೆ ಮೇಳವಿಸುವ ಪ್ರಕ್ರಿಯೆಯಾಗಿದೆ. ಅದು ಭಗವಂತನನ್ನು ಆತನ ವಿಶಾಲ ಹಾಗೂ ಶಾಶ್ವತವಾದ ಏಕತೆಯನ್ನು ಜೊತೆಗೂಡಿಸಿ ನಮಗೆ ತಿಳಿಸುವಂತಹ ಮಾರ್ಗವಾಗಿದೆ. ನಮ್ಮ ಮನಸ್ಸೆಂಬುದು ಒಂದು ರೇಡಿಯೋ ಅಥವಾ ಧ್ವನಿಗ್ರಹಣದ ವ್ಯವಸ್ಥೆಯಂತೆ. ನಮಗೆ ಬೇಕಾದ ಬಾನುಲಿ(ಆಕಾಶವಾಣಿ) ನಿಲಯಕ್ಕೆ ನಾವು ರೇಡಿಯೋದ ಗುಬಟನ್ನು ತಿರುಗಿಸುವುದಿಲ್ಲವೇ? ಅದೇ ರೀತಿಯಲ್ಲಿ ಪ್ರಾರ್ಥನೆ ಮಾಡುವ ಸಲುವಾಗಿ ನಮ್ಮ ಮನಸ್ಸನ್ನು ತಿರುಗಿಸಿದಲ್ಲಿ ಅಷ್ಟೇ ಸಾಕು. ಆ ನಿಲಯಕ್ಕೆ ಸಣ್ಣ ಸ್ಪರ್ಶ ಮಾಡಿದಲ್ಲಿ, ಅಲ್ಲಿಂದ ತಾನಾಗಿ ಹಾಡುಗಳು ಕೇಳಿಸಲು ಆರಂಭವಾಗುವಂತೆ, ಭಗವಂತನಿರುವಲ್ಲಿ ನಮ್ಮ ಮನಸ್ಸನ್ನು ತುಸು ಸ್ಪರ್ಶಿಸಲು ವ್ಯವಸ್ಥೆ ಮಾಡಿದಲ್ಲಿ, ಆತನ ಮಾತು, ಉಪದೇಶ ನಮಗೆ ಕೇಳಿಸಲಾರಂಬಿಸುತ್ತವೆ. ಯಾವುದೋ ನಿಲಯದಿಂದ ನಮಗೆ ಸಂಗೀತ ಚೆನ್ನಾಗಿ ಕೇಳಬೇಕೆಂದಾದಲ್ಲಿ ಅಲ್ಲಿಗೆ ಸೂಚಕವೂ ಸ್ಥಿರವಾಗಿ ಇರುವಂತೆ ನಾವು ಮಾಡಬೇಕಾಗುತ್ತದೆ. ಲೌಕಿಕ ವಿಷಯಗಳ ನಿಲಯದಲ್ಲಿ ನಮ್ಮ ಸೂಚಕವಿದ್ದಲ್ಲಿ ಅಥವಾ ಅದು ಚಂಚಲವಾಗಿದ್ದಲ್ಲಿ ಭಗವಂತನ ನಿಲಯದಿಂದ ಪ್ರಸಾರವಾಗುವಂತಹದನ್ನು ನಾವು ಕೇಳಲಾಗುವುದಿಲ್ಲ.

ಪ್ರಾರ್ಥನೆಯು ಪ್ರಕೃತಿಯ ನಿಯಮಗಳ ಜತೆ ಹೊಂದಿಕೊಂಡಿರುವಂತಹುದೂ ಆಗಿರಬೇಕು. ಭಗವಂತನ ದಯೆ ಮತ್ತು ಕೃಪೆ ನಮಗೆ ಬೇಕೆಂದಾದಲ್ಲಿ ನಾವು ಮಾಡುವ ಪ್ರಾರ್ಥನೆಯು ಸಹ ಪ್ರಕೃತಿಯ ನಿಯಮಗಳಿಗನುಸಾರವಾಗಿ ಇರಬೇಕು. ಕ್ಷಣಕಾಲ ಯೋಚಿಸಿ, ಬೆಂಕಿಯೊಳಗೆ ಕೈಯನ್ನಿರಿಸಿ, ಬೆಂಕಿಯು ನನ್ನ ಕೈಯನ್ನು ಸುಡದಿರಲಿ ಎಂದು ಪ್ರಾರ್ಥಿಸಿದಲ್ಲಿ ಅದು ಪ್ರಕೃತಿಯ ನಿಯಮಕ್ಕೆ ವಿರುದ್ಧವಾದುದು. ಅದೇ ರೀತಿಯಲ್ಲಿ ಯಾರಿಗೋ ಡಯಾಬಿಟೆಸ್ ಮತ್ತು ರಕ್ತದೊತ್ತಡ ಸಮಸ್ಯೆಯಿದೆ ಎಂದಿಟ್ಟುಕೊಳ್ಳಿ, ಅದರ ಪರಿಹಾರಕ್ಕಾಗಿ ಆತ ಪ್ರಾರ್ಥಿಸುವುದಿದ್ದಲ್ಲಿ, ಆತ ಆಹಾರದಲ್ಲಿ ಸಕ್ಕರೆ ಮತ್ತು ಉಪ್ಪು ಹೆಚ್ಚಿರಬಾರದು ಎಂಬ ಸಂಯಮ ಕಾಪಾಡಬೇಕಾದುದು ಸಹ ಅಷ್ಟೇ ಮಹತ್ವದ ಸಂಗತಿ.

ನಮ್ಮ ಬದುಕು ಈಗಾಗಲೇ ನಮ್ಮ ಹಿಂದಿನ ಕರ್ಮಗಳ ಹೊರೆಯಿಂದ ಕೂಡಿರುವಂತಹದು. ಆದರೆ ಪ್ರಸ್ತುತ ಕೃತಿ ಮತ್ತು ಪ್ರಾರ್ಥನೆಯ ಮೂಲಕ ಅದರಲ್ಲಿ ವ್ಯತ್ಯಾಸ ತರಲು ನಮಗೆ ಅವಕಾಶಗಳಿವೆ. ವಿಜ್ಞಾನಿಗಳು ಹೇಳುವಂತೆ ಜಗತ್ತಿನ ಯಾವುದೋ ಒಂದು ಮೂಲೆಯಲ್ಲಿ ಹಾರಾಡುವ ಒಂದು ಚಿಟ್ಟೆಯ ರೆಕ್ಕೆಗಳ ಬಡಿತದ ತರಂಗವು, ಇನ್ನಾವುದೋ ಮೂಲೆಯಲ್ಲು ಬಿರುಗಾಳಿಯನ್ನೇ ಸೃಷ್ಟಿಸಬಲ್ಲುದು. ಆರ್ಕಟಿಕ್ ಪ್ರದೇಶದಲ್ಲಿ ಮಂಜುಗಡ್ಡೆ ಕರಗಿದಲ್ಲಿ ಇನ್ನಾವುದೋ ಪ್ರದೇಶದಲ್ಲಿ ಪ್ರವಾಹವೇ ಉಕ್ಕಬಹುದು. ಹಿಮಾಲಯದಲ್ಲಿ ಹಿಮ ಮಳೆಯಾದಲ್ಲಿ ದೆಹಲಿಯಲ್ಲಿರುವವರಿಗೆ ಚಳಿಯ ನಡುಕವುಂಟಾಗುತ್ತದೆ. ಅದರರ್ಥವೆಂದರೆ, ಭೌತಿಕ ಜಗತ್ತು ಸಹ ಭೌತಿಕ ನಿಯಮಗಳನ್ನನುಸರಿಸಿ ಕಾರ್ಯವೆಸಗುತ್ತದೆ. ಭೌತಿಕ ಜಗತ್ತಿನ ವ್ಯವಸ್ಥೆಯಲ್ಲಿ ಪರಸ್ಪರ ಸಂಬಂಧಗಳಿರುವುದು ಸುಸ್ಪಷ್ಟ

ನಮ್ಮ ಸೂಕ್ಷ್ಮ ಜಗತ್ತು ಸಹ ಕರ್ಮದ ನಿಯಮದಂತೆ, ಎಂದರೆ ಕಾರ್ಯಕಾರಣದ ನಿಯಮದಂತೆ ಕೆಲಸಮಾಡುವಂಥದು. ನಮ್ಮ ಎಲ್ಲ ಕೃತಿಗಳ ಛಾಪು ನಮ್ಮ ಶರೀರದಲ್ಲಿ

ಅನುದ್ದೇಶಿತವಾಗಿಯೇ ಎಲ್ಲೋ ಒಂದು ಕಡೆ ದಾಖಲಾಗಿ ಜಮೆಯಾಗಿರುತ್ತದೆ. ಮುಂದೆ ಸಕಾಲದಲ್ಲಿ ಅದು ತನ್ನ ಫಲವನ್ನು ನೀಡುತ್ತದೆ. ನಮ್ಮೆಲ್ಲ ವಿಚಾರ ಮತ್ತು ಕೃತಿಗಳನ್ನು ಪ್ರಕೃತಿಯು ದಾಖಲು ಮಾಡಿಡುತ್ತದೆ. ಈ ದಾಖಲೆ ನಮ್ಮ ಬದುಕಿನ ವಿಮಾನದ ಎಂದೂ ನಾಶವಾಗದ ಬ್ಲಾಕ್ ಬಾಕ್ಸ್ ಇದ್ದಂತೆ. ಅದೇ ರೀತಿಯಲ್ಲಿ ನಮ್ಮ ಅನುದ್ದಿಷ್ಟಿತ ಶರೀರವೂ ನಮ್ಮ ಹಿಂದಿನ ಎಲ್ಲ ಕೃತಿಗಳ ದಾಖಲೆಗಳನ್ನು ಇರಿಸಿ ಕೊಂಡಿದ್ದು, ತದನುಗುಣವಾಗಿ ಫಲಗಳನ್ನು ನೀಡುತ್ತದೆ. ನಮ್ಮ ಹಿಂದಿನ ಕರ್ಮಗಳಿಗನುಗುಣವಾಗಿ ನಮ್ಮ ಈಗಿನ ಬದುಕು ರೂಪುಗೊಂಡಿರುತ್ತದೆ. ಆದರೆ ಈಗಿನ ಕೃತಿಗಳಿಂದ ಮತ್ತು ಪ್ರಾರ್ಥನೆಯಿಂದ ಅದನ್ನು ರೆಕಾರ್ಡ್ ಮಾಡ ಲಾಗಿರುವ ಆಡಿಯೋ ಕ್ಯಾಸೆಟ್ ಮೇಲೆ ಹೊಸ ಹಾಡನ್ನು ರೆಕಾರ್ಡ್ ಮಾಡಲಾಗುವುದಿಲ್ಲವೆ? ಅದೇ ರೀತಿಯಲ್ಲಿ ಇದು ಸಹ.

ಪ್ರಾರ್ಥನೆಯನ್ನು ಒಂದು ಆಧ್ಯಾತ್ಮಿಕ ಸಾಧನವಾಗಿ ಮಾಡಿಕೊಳ್ಳಿ. ಪ್ರಾರ್ಥನೆಗಳಿಂದ ಚಮತ್ಕಾರಗಳು ಸಂಭವಿಸ ಬಹುದು. ಯಾವುದೇ ತೊಂದರೆಯಾದಾಗ, ಅಥವಾ ಅಗತ್ಯ ವೆನಿಸಿದಾಗ ಮೊಟ್ಟಮೊದಲು ಪ್ರತಿಕ್ರಿಯೆಯೆಂದರೆ ಪ್ರಾರ್ಥನೆಯೇ ಆಗಬೇಕು. ಭಗವಂತ ಎಲ್ಲದಕ್ಕೂ ಉತ್ತರಿಸಬಲ್ಲ. ಇನ್ನಾರೂ ನಮ್ಮ ನೆರವಿಗೆ ಬರದಿದ್ದಾಗ, ನಿಜಕ್ಕೂ ನಮ್ಮ ಸಹಾಯಕ್ಕೆ ಬರುವವನು ಅವನೊಬ್ಬನೇ. ಪ್ರಾರ್ಥನೆಯಲ್ಲಿ ಅಂತಹ ಸಾಮರ್ಥ್ಯವಿರದಿದ್ದಲ್ಲಿ ಯುಗ ಯುಗಾಂತರಗಳಿಂದ ಜನರು ಅದರಲ್ಲಿ ಭರವಸೆ ಯಿಡುತ್ತಿದ್ದರೇ? ಪ್ರಾರ್ಥನೆಯಲ್ಲಿರುವ ಶಕ್ತಿಯನ್ನು ನೀವೇ ಗುರುತಿಸಿಕೊಳ್ಳಿವಿರಲ್ಲ.

ಕೃಪೆ: ಆಪ್ತ ಸಂವಾದ

## ಶ್ರೀವಾಣಿ

ಮನುಷ್ಯನ ಆಚರಣೆ ಶುದ್ಧವಾಗಿರಬೇಕು. ನಡೆನುಡಿ ಶುದ್ಧವಾಗಿರಬೇಕು. ನಿಜವಾದ ಭಕ್ತಿಬೇಕು. ಪ್ರಾರ್ಥನೆ ಮಾಡತಕ್ಕ ಒಂದು ಅವಕಾಶ ಸಿಕ್ಕಿರುವುದು ಅದೊಂದು ಸುವರ್ಣಾವಕಾಶ. ಪ್ರಾರ್ಥನೆಗೆ ಸಕಾಲಕ್ಕೆ ಬಂದು ಭಕ್ತಿಯಿಂದ ಕುಳಿತುಕೊಂಡು ಮತ್ತು ಭಕ್ತಿ ಯಿಂದಲೇ ಪ್ರಾರ್ಥನೆ ಮಾಡಬೇಕು. ಅದರ ಫಲ ನಂತರ ನಿಧಾನವಾಗಿ ಗೊತ್ತಾಗುತ್ತದೆ.

## ಇಷ್ಟಲಿಂಗದ ವೈಜ್ಞಾನಿಕತೆ

ಇಷ್ಟಲಿಂಗ ಮತ್ತು ಇಷ್ಟಲಿಂಗದ ಪೂಜೆಯು ವೈಜ್ಞಾನಿಕವಾಗಿದೆ, ಇಷ್ಟಲಿಂಗವು ಭೂಮಿಯ ಹಾಗೆ ಗೋಲಾಕಾರವಾಗಿದ್ದು ಇಡೀ ಜಗತ್ತು ಅದರಲ್ಲಿ ಅಡಗಿ ರುವುದರ ಸಂಕೇತವಾಗಿದೆ. ಇಷ್ಟಲಿಂಗಕ್ಕೆ ಕೊಡುವ ಕಾಂತಿಯು ಕಪ್ಪು, ಕಾಂತಿಯನ್ನು ತಯಾರಿಸುವ ಬೂದಿಯೂ ಕಪ್ಪು, ಕಾಂತಿಯನ್ನು ಮಾಡುವಾಗ ಉಪ ಯೋಗಿಸುವ ಕೇರೆಣ್ಣೆಯೂ ಕಪ್ಪು ಅಲ್ಲದೇ ಕಣ್ಣುಗುಡ್ಡೆ ಗಳು ಕಪ್ಪು ಇರುವುದರಿಂದ ಲಿಂಗವನ್ನು ತದೇಕ ದೃಷ್ಟಿ ಯಿಂದ ನಿರೀಕ್ಷಿಸಿದಾಗ ಮಧ್ಯ ಏರ್ಪಡುವ ದೃಷ್ಟಿಯೋಗ ದಿಂದ ಕಣ್ಣಿನ ಕಾಂತಿ ಕಳೆಯೇರುತ್ತದೆ.

ಕೇರು, ರೋಗ ನಿವಾರಕವಾದುದರಿಂದ ಲಿಂಗಕ್ಕೆ ಕಪ್ಪು ಕಂತೆಯು ಅನುರೂಪವಾಗಿದೆ. ಲಿಂಗದ ಮೇಲೆ ಪಾದೋದಕವನ್ನು ಎರೆದು ಸ್ವೀಕರಿಸುವುದರಿಂದ ರೋಗ ನಿವಾರಣೆಯಾಗಿ ಮನಸ್ಸು ಪ್ರಪುಲ್ಲಿತವಾಗುತ್ತದೆ. ಮೆದುಳಿ ನಲ್ಲಿ ಇರುವ ಹೈಪೋಥಾಲ್ಮಸ್ ಕೇಂದ್ರವನ್ನು ಸಮತೋಲ ನಕ್ಕೆ ತಂದು ಮಾನಸಿಕ ನೆಮ್ಮದಿಯನ್ನು ನೀಡುತ್ತದೆ. ಏಕಾಗ್ರತೆಯ ಲಿಂಗಪೂಜೆಯಿಂದ ಮನಸ್ಸು ಶಾಂತಚಿತ್ತ ವಾಗಿ ಶರೀರದಲ್ಲಿ ಎಂಡಾರ್ಫಿನ್ಸ್ ಮುಂತಾದ ಹಾರ್ಮೋನ್ ಗಳು ಸ್ರವಿಸಿ ದೇಹದ ಆರೋಗ್ಯವನ್ನು ಹೆಚ್ಚಿಸುವವ ರೊಂದಿಗೆ ಮೆದುಳಿನಲ್ಲಿರುವ ನ್ಯೂರೋಪಪ್ಟಿಡ್ ನಂತಹ ಪ್ರೋಟೀನುಗಳನ್ನು ಸ್ರವಿಸಿ ತೃಷೆಯನ್ನು ನಿಯಂತ್ರಿಸುತ್ತ ದಲ್ಲದೆ ಔಷಧಿಯ ರೂಪದಲ್ಲಿ ಕಾರ್ಯ ನಿರ್ವಹಿಸಿ ಹೃದಯ ರೋಗ ರಕ್ತ ಒತ್ತಡ ರೋಗಗಳನ್ನು ಹತೋಟಿಗೆ ತರಲು ಯತ್ನಿಸುತ್ತದೆ. ಈ ಎಲ್ಲ ಕಾರಣಗಳಿಂದ ಇಷ್ಟ ಲಿಂಗ ಪೂಜೆಯು ವೈಜ್ಞಾನಿಕವಾಗಿದ್ದು ಸಾಧಕರ ಮೇಲೆ ಒಳ್ಳೆಯ ಪರಿಣಾಮ ಬೀರುತ್ತದೆ.

–ವಿನಯ ಅಂಗಡಿ
ನ್ಯೂಜಿಲೆಂಡ್





# ವಿಶ್ವಸಂಸ್ಕೃತಿಗೆ ವೀರಶೈವ ಸಂಸ್ಕೃತಿಯ ಕಾಣಿಕೆ

–ಪ್ರೊ. ಡಿ. ಜವರೇಗೌಡ, ಮಾಜಿ ಉಪ ಕುಲಪತಿಗಳು, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

**ಜಗತ್ತು ಮಾಯೆಯಲ್ಲ; ಸಾಧನೆಯ ಪವಿತ್ರ ಕ್ಷೇತ್ರ :**

ನೀತಿಯ ನೆಲಗಟ್ಟಿನ ಮೇಲೆ, ಅಷ್ಟಾವರಣಗಳ ಚೌಕಟ್ಟಿ ನಲ್ಲಿ, ಯೋಗ ಸಮನ್ವಯದ ಬೆಳಕಿನಲ್ಲಿ, ಷಟ್ಸ್ಥಲ ಸಿದ್ಧಾಂತದ ಮಾರ್ಗದಲ್ಲಿ ಲಿಂಗಾಂಗ ಸಾಮರಸ್ಯವನ್ನು ಸಾಧಿಸ ಬೇಕೆಂಬುದೇ ವೀರಶೈವದ ಅಂತಿಮ ಧ್ಯೇಯ. ಆ ಧ್ಯೇಯದ ಹಿನ್ನಲೆಯಲ್ಲಿ ಲೋಕಕಲ್ಯಾಣಾಕಾಂಕ್ಷೆಯೂ ಇದೆಯೆಂಬು ದನ್ನು ಮರೆಯುವಂತಿಲ್ಲ. ಎಲ್ಲ ಸಾಧನೆಗಳಿಗೆ ಕಾಯವೇ ಮೂಲವಾದ್ದರಿಂದ, ಅದನ್ನು ಅನವಶ್ಯವಾಗಿ ದಂಡಿಸಬಾರ ದೆಂದು–ಶರಣರು ವಾದಿಸುತ್ತಾರೆ. ಕಾಯವಿಲ್ಲದೆ ಕಾಯಕ ದಾಸೋಹಗಳ ಕಲ್ಪನೆಯೇ ಸಾಧ್ಯವಿಲ್ಲ. ಕಮಲ ತನ್ನಿರವಿಗೆ ಪಂಕವನ್ನು ಬಳಸಿಕೊಂಡು; ಹೊದ್ದಿಯೂ ಹೊದ್ದದಂತಿರು ವಂತೆ, ಶರಣ ಕಾಯಕವನ್ನು ಬಳಸಿಕೊಳ್ಳಬೇಕೆಂಬುದು ಅವರ ವಾದ.

*ಪಂಕವಿಲ್ಲದೆ ಕಮಲಕ್ಕೆ ಸುಲಲಿತವೆಂತಪ್ಪುದಯ್ಯ?*
*ಹೊನ್ನು ಹೆಣ್ಣು ಮಣ್ಣುಗಳಿಲ್ಲದೆ*
*ದೇವತಾಯೋಗ್ಯವೆಂತಪ್ಪುದಯ್ಯ?*
*ಕಮಲ ಪಂಕದಲ್ಲಿ ವರ್ತಿಸಿದಂತೆ ಇಹರು ನಿಮ್ಮ*
*ಶರಣರು*
*ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ*

ಎಂಬ ಉರಿಲಿಂಗಪೆದ್ದಿಯ ಸೂಳ್ನುಡಿ ಎಲ್ಲ ಕಾಲಗಳ ಲ್ಲಿಯೂ ಎಲ್ಲ ದೇಶಗಳಲ್ಲಿಯೂ ಉಪಾದೇಯವಾದದ್ದು. ಪಂಕ ವಿನಾ ಕಮಲಕ್ಕೆ ತಾವೆಲ್ಲಿ? ಪಂಕ ಒಣಗಿದರೆ ಕಮಲ ಬದುಕುತ್ತದೆಯೆ?

*ಕಾಯದಿಂದ ಗುರುವ ಕಂಡೆ, ಕಾಯದಿಂದ ಲಿಂಗವ*
*ಕಂಡೆ,*
*ಕಾಯದಿಂದ ಸಕಳೇಶ್ವರದೇವರ ಪೂಜಿಸುವಲ್ಲಿ*
*ಉತ್ತರ ಸಾಧಕನಾದೆಯಲ್ಲಾ ಎಲೆ ಕಾಯವೆ*

ಎಂಬ ಸಕಳೇಶಮಾದರಸನ ಅನುಭವ ಎಲ್ಲ ಮಾನವರು ಅರಿತದ್ದೇ ಆಗಿದೆ. ಕಾಯವೆ ಕೈಲಾಸವೆಂದು ಷಣ್ಮುಖಸ್ವಾಮಿ ಮೊದಲಾದ ಶರಣರೆಲ್ಲರೂ ಒಪ್ಪಿಕೊಳ್ಳುತ್ತಾರೆ.

*ಕಾಯ ನಿಮ್ಮ ದಾನ, ಜೀವ ನಿಮ್ಮ ದಾನ,*
*ಕಾಯ ಜೀವವುಳ್ಳಲ್ಲಿಯೇ ನಿಮ್ಮ ಪೂಜಿಸದ*
*ನಾಯಿಗಳೇನೆಂಬೆ ಹೇಳಾ ರಾಮನಾಥಾ*

ಎಂದು ದೇವರ ದಾಸಿಮಯ್ಯ ಹೇಳುವಂತೆ, ಕಾಯವೂ ಪ್ರಸಾದರೂಪದಲ್ಲಿ ಶಿವನಿಂದ ಬಂದದ್ದೇ ಹೊರತು, ಅನ್ಯರಿಂದಲ್ಲ. ಅಂದಮೇಲೆ ಅವನಿಂದ ಬಂದದ್ದನ್ನು ಸರಿಯಾಗಿ ಬಳಸಿಕೊಂಡು, ಮತ್ತೆ ಅವನಿಗದನ್ನು ಅರ್ಪಿಸುವುದೇ ಮಾನವಧರ್ಮ. ಶಿವನ ಸೊಮ್ಮು ಶಿವನಿಗೆ ಸೇರಬೇಕಷ್ಟೆ. ಅಂದಮೇಲೆ ಅಂಥ ಪವಿತ್ರ ಕಾಯವನ್ನು ನಿರ್ಲಕ್ಷಿಸದೆ, ಅದನ್ನು ಅನ್ಯಾಯಕ್ಕೆ ಬಳಸದೆ, ಶಿವನ ಕೈಂಕರ್ಯಕ್ಕೋಸ್ಕರವೇ ಬಳಸಬೇಕೆಂಬುದು ಶರಣರ ಅಭಿಮತ.

ಲೋಕಹಿತ ಸಾಧನೆಗೆ ಹಾಗೂ ಈಶ್ವರ ಸಾಕ್ಷಾತ್ಕಾರಕ್ಕೆ ಸಾಧನವಾಗಿರುವ ಕಾಯಕ್ಕೆ ಮಾಡುವ ಉಪಚಾರವೆಲ್ಲ ಈಶ್ವರನಿಗೆ ಸಲ್ಲುತ್ತದೆಂಬ ಭಾವನೆ ಉರಿಲಿಂಗಪೆದ್ದಿಯ ಮುಂದಿನ ವಚನದಲ್ಲಿ ಭಾವಾತ್ಮಕವಾಗಿ ಹೊರಹೊಮ್ಮುತ್ತದೆ.

*ಎನ್ನಂಗದಲ್ಲಿ ನಿನಗೆ ಮಜ್ಜನ, ಎನ್ನ ಲಲಾಟದಲ್ಲಿ*
*ನಿನಗೆ ಗಂಧಾಕ್ಷತೆ.*
*ಎನ್ನ ತುರುಬಿನಲ್ಲಿ ನಿನಗೆ ಕುಸುಮ ಪೂಜೆ*
*ಎನ್ನ ನೇತ್ರದಲ್ಲಿ ನಿನಗೆ ನಾನಾರೂಪು ವಿಚಿತ್ರ*
*ವಿನೋದ*
*ಎನ್ನ ಶ್ರೋತ್ರದಲ್ಲಿ ನಿನಗೆ ಪಂಚ ಮಹಾವಾದ್ಯ ಕೇಳಿಕೆ*
*ಎನ್ನ ನಾಸಿಕದಲ್ಲಿ ನಿನಗೆ ಸುಗಂಧಧೂಪ ಪರಿಮಳ*
*ಎನ್ನ ಜಿಹ್ವೆಯಲ್ಲಿ ನಿನಗೆ ಷಡ್ರಸಾನ್ನ ನೈವೇದ್ಯ*
*ಎನ್ನ ತ್ವಕ್ಕಿನಲ್ಲಿ ನಿನಗೆ ವಸ್ತ್ರಾಭರಣ ಅಲಂಕಾರ ಪೂಜೆ*
*ಎನ್ನ ಸಚ್ಚಿದಾನಂದವೆಂಬ ಸೆಜ್ಜೆ ಗೃಹದಲ್ಲಿ ನೀನು*
*ಸ್ಪರ್ಶನಂಗೈದು ನೆರೆದಿಪ್ಪೆಯಾಗಿ*
*ನೀ ನಾನೆಂಬೆರಡಳಿದು ತಾನು ತಾನಾದ*
*ಘನವನೇನೆಂಬೆನು*
*ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ !*

ಪ್ರಪಂಚದ ಯಾವ ಸಂತ ಸಾಹಿತ್ಯದಲ್ಲಿ ಇದಕ್ಕಿಂಥ ಉದಾತ್ತವಾದ ಆಧ್ಯಾತ್ಮಭಾವ ಸಿಗುತ್ತದೆಯೊ ಕಾಣೆ. ನಿರಂತರ ಸಾಧನೆಯಲ್ಲಿ ಸದಾ ಆಧ್ಯಾತ್ಮದಲ್ಲಿ ಮುಳುಗಿರುವ ಮಹಾನುಭವ ಮಾತ್ರ ಕಾಯದ ಒಂದೊಂದು ಅಂಗದಲ್ಲಿಯೂ ಶಿವನನ್ನೇ ಕಾಣುತ್ತಾನೆ. ಇಂದ್ರಿಯಗಳನ್ನು ದೂರುವ, ಇಂದ್ರಿಯ ಸುಖವನ್ನು ದ್ವೇಷಿಸುವ, ಇಂದ್ರಿಯ

ಚಾಪಲ್ಯಕ್ಕೊಳಗಾಗುವ ಜನರಿಗೆ ಇಂದ್ರಿಯಗಳೇ ಶತ್ರುಗಳು. ಕಾಯವೆಂಬ ರಥದ ವಾಜಿಗಳೇ ಈ ಇಂದ್ರಿಯಗಳು. ರಥದೊಳಗಿರುವ ಮನವೆಂಬ ಸಾರಥಿ ನಡೆಸಿದ ಕಡೆಗೆ ಅವು ರಥವನ್ನೆಳೆದೊಯ್ಯುತ್ತವೆ. ಆ ಕುದುರೆಗಳು ರಥವನ್ನು ಜೂಜಿನ ಮನೆಗಾದರೂ ಒಯ್ಯಬಹುದು. ದೇವಾಲಯಕ್ಕಾದರೂ ಒಯ್ಯಬಹುದು, ಇಂದ್ರಿಯ ವ್ಯಾಪಾರಗಳಲ್ಲಿಯೂ ಭಗವದ್ದರ್ಶನ ಸಾಧ್ಯವೆನ್ನುವುದಕ್ಕೆ ಶಿವಲೆಂಕ ಮಂಚಣ್ಣನ ವಚನವೊಂದು ಸಾಕ್ಷಿಯಾಗಿದೆ.

*ರಸವನರಿವುದಕ್ಕೆ ಜಿಹ್ವೆಯಾಗಿ ಬಂದು,*
*ಗಂಧವನರಿವುದಕ್ಕೆ ನಾಸಿಕವಾಗಿ ಬಂದು,*
*ರೂಪವಚನರಿವುದಕ್ಕೆ ನೇತ್ರವಾಗಿ ಬಂದು,*
*ಶಬ್ದವನರಿವುದಕ್ಕೆ ಶ್ರೋತ್ರವಾಗಿ ಬಂದು,*
*ಸ್ಪರ್ಶವನರಿವುದಕ್ಕೆ ಶ್ರೋತ್ರವಾಗಿ ಬಂದು,*
*ಇಂತೆನ್ನ ಘಟದ ಮಧ್ಯದಲ್ಲಿ ನಿಂದು*
*ಪಂಚವಕ್ತ್ರನಾದೆಯಲ್ಲಾ*
*ಈಶಾನ್ಯಮೂರ್ತಿ ಮಲ್ಲಿಕಾರ್ಜುನ ಲಿಂಗವೇ ?*

ಕಾಣುವ ಕಣ್ಣಿದ್ದವರಿಗೆ, ಅನುಭವಿಸುವ ಮನವಿದ್ದರಿಗೆ ಒಂದೊಂದು ಇಂದ್ರಿಯದಲ್ಲಿಯೂ ಶಿವನಿರುತ್ತಾನೆಂಬುದು, ನಿಜವಾದ ಶರಣ ಲಿಂಗಶರೀರಿಯೆಂಬುದು ಈ ವಚನದಿಂದ ವ್ಯಕ್ತವಾಗುತ್ತದೆ.

ಉಂಡು ಉಪವಾಸಿಯಾಗಿ, ಬಳಸಿ ಬ್ರಹ್ಮಚಾರಿಯಾಗಿ ಇರಬೇಕೇ ಹೊರತು, ಮಾನವ ಆಯಾಯ ಇಂದ್ರಿಯಗಳಿಗೆ ಸಹಜವಾದ ಸತ್ಕರ್ಮಗಳನ್ನು ನಿರೋಧಿಸಬಾರದೆಂಬುದು ಶರಣರ ಮತ. ಅಂಥ ನಿರೋಧದಿಂದ ಅನರ್ಥವೇ ಅಧಿಕ. ಸತಿಯೊಡನಾಟ ತಪ್ಪಲ್ಲ; ಪರಸತಿ ವ್ಯಾಮೋಹ ಸಲ್ಲದು.

*ಇಂದ್ರಿಯ ನಿಗ್ರಹವ ಮಾಡಿದರೆ ಹೊಂದುವುವು*
*ದೋಷಂಗಳು ;*
*ಮುಂದೆ ಬಂದು ಕಾಡುವುವು ಪಂಚೇಂದ್ರಿಯಂಗಳು!*
*ಸತಿಪತಿ ರತಿಸುಖವ ಬಿಟ್ಟರೆ ಸಿರಿಯಾಳ*
*ಚಂಗಳೆಯರು?*

ಎಂದು ಬಸವಣ್ಣನವರೆ ಪ್ರಶ್ನಿಸುತ್ತಾರೆ. ನ್ಯಾಯರೀತಿಯ ಸರ್ವಾಂಗ ಭೋಗವನ್ನು ಶಿವನಿಗರ್ಪಿಸಿದಾಗಲೇ ವಿವಾಹ ಸಾರ್ಥಕವಾಗುತ್ತದೆ. ಹೆಣ್ಣು ಗಂಡಿಗೆ, ಗಂಡು ಹೆಣ್ಣಿಗೆ ಪೂರಕವೂ ಹೌದು. ತಾರಕವೂ ಹೌದು. ಅವರ ಕೂಟ ಸೃಷ್ಟಿನಿಯಮವೂ ಹೌದು. ಆದರೆ ಅವರು ಸಂಯಮ ಮೀರಿ ಜಾರಿದಾಗ ಸೃಷ್ಟಿನಿಯಮವನ್ನುಲ್ಲಂಘಿಸಿದಂತಾಗುತ್ತದೆ. ಇಂದ್ರಿಯಗಳ ದುರುಪಯೋಗದಿಂದ ಮಾರಿಮಸಣಿಯರಿಗೆ ಆಹ್ವಾನವಿತ್ತಂತಾಗುತ್ತದೆ. 'ಕಂಗಳು ತಪ್ಪಿ ನೋಡಿದಡೆ ಮಾರಿ; ನಾಲಗೆ ತಪ್ಪಿ ನುಡಿದಡೆ ಮಾರಿ' ಎಂದು ಬಸವಣ್ಣ ಹೇಳುತ್ತಾರೆ. ಇಂತೆಯೇ ಇತರ ಅಂಗಗಳ ಅಪರಾಧವೂ ಮಾರಿಯಾಗುತ್ತದೆ. ಮದ್ಯ ಮಾಂಸಗಳನ್ನು ಮುಟ್ಟುವುದಿಲ್ಲವೆನ್ನುವವರ ಮುಂದೆಯೂ ಅಲ್ಲಮಪ್ರಭುಗಳು ಸವಾಲೆಸೆಯುತ್ತಾರೆ. 'ಮದ್ಯವಲ್ಲವೇನು ಅಷ್ಟಮದಂಗಳು? ಮಾಂಸವಲ್ಲವೇನು ಸಂಸಾರ ಸಂಗವು?' ಎಂದವರು ಪ್ರಶ್ನಿಸುತ್ತಾರೆ. ಸಂಸಾರ ಅನಿತ್ಯ ನಿಜ; ಆದರೆ ನಿತ್ಯಕ್ಕೊಯ್ಯುವ ಸಾಧನವೆಂಬುದಂತು ನಿಜ.

ಈ ಜಗತ್ತು ಮಾಯೆಯನ್ನುವ ಆಚಾರ್ಯರು ಅವಿವೇಕಿಗಳೆಂದೇ ಹೇಳಬೇಕಾಗುತ್ತದೆ. ತಿನ್ನುವ ಅನ್ನ, ಕುಡಿಯುವ ನೀರು, ಮೂಸುವ ಗಂಧ, ಪೂಜಿಸುವ ವಿಗ್ರಹ, ಧರಿಸುವ ಕಾವಿ, ನಡೆಯುವ ದಾರಿ, ದಹಿಸುವ ಅಗ್ನಿ, ಚಲಿಸುವ ಗಾಳಿ- ಸೃಷ್ಟಿಯ ಪ್ರತಿಯೊಂದು ವ್ಯಾಪಾರವೂ ಮಾಯೆಯನ್ನಬೇಕಾಗುತ್ತದೆ. ಅಂದಮೇಲೆ ತಿಂಡಿ ತೀರ್ಥ ಕಾವಿಗಳನ್ನು ಸಹ ತ್ಯಜಿಸಿದವನೆ ನಿಜವಾದ ಆಚಾರ್ಯನೆನ್ನಬೇಕಾಗುತ್ತದೆ. ಭಗವಂತನೇ ಸೃಷ್ಟಿಕರ್ತ; ಅವನೇ ಸರ್ವಾಂತರ್ಯಾಮಿಯೆನ್ನುವುದಾದರೆ, ಅಹಂಬ್ರಹ್ಮಾಸ್ಮಿ ಎನ್ನುವುದಾದರೆ, ಜಗತ್ತನ್ನಾಗಲಿ, ಅಲ್ಲಿ ನಡೆಯುವ ವ್ಯಾಪಾತಗಳನ್ನಾಗಲಿ ಮಾಯೆಯೆಂದು ಕರೆಯಲಾಗದು. ಭಗವಂತನೇ ದಯಪಾಲಿಸಿರುವ ಜಗತ್ತನ್ನು ಹುಸಿಯೆಂದು ಅಲ್ಲಗಳೆದದ್ದಾದರೆ, ದೈವ ದ್ರೋಹವಾಗುವುದಿಲ್ಲವೆ? ಅಹಂಕಾರವಾಗುವುದಿಲ್ಲವೇ? ಭೌತ ವಿಜ್ಞಾನದ ಪ್ರಕಾರ ಲೋಕದ ಯಾವ ವಸ್ತುವಿಗೂ ವಿನಾಶವಿಲ್ಲ, ಯಾವುದೂ ಮಾಯೆಯಲ್ಲ.

*ಇಳೆ ನಿಮ್ಮದಾನ, ಬೆಳೆ ನಿಮ್ಮ ದಾನ*
*ಸುಳಿದು ಬೀಸುವ ವಾಯು ನಿಮ್ಮ ದಾನ*
*ಎತ್ತು ನಿಮ್ಮ ದಾನ, ಬಿತ್ತು ನಿಮ್ಮ ದಾನ*

ಎಂಬ ದಾಸಿಮಯ್ಯನ ಮಾತಿನಿಂದ ಇಡೀ ಜಗತ್ತೇ ದೇವರ ಪ್ರಸಾದವೆಂದು ಹೇಳಬೇಕಾಗುತ್ತದೆ.

*ಮಾಯೆಯ ಅರ್ಥವನ್ನು ವೈರಾಗ್ಯಶಿಖಾಮಣಿ ಪ್ರಭುದೇವರಂತೆ ಪಾಮರರಿಗೂ ಅರ್ಥವಾಗುವ ರೀತಿಯಲ್ಲಿ ಜಗತ್ತಿನ ಯಾವ ಸಂತನೂ, ಯಾವ ಆಚಾರ್ಯನೂ ಸ್ಪಷ್ಟವಾಗಿ ವಿವರಿಸಿಲ್ಲ.*

*ಹೊನ್ನು ಮಾಯೆಯೆಂಬರು, ಹೊನ್ನು ಮಾಯೆಯಲ್ಲ*
*ಹೆಣ್ಣು ಮಾಯೆಯೆಂಬರು, ಹೆಣ್ಣು ಮಾಯೆಯಲ್ಲ,*
*ಮಣ್ಣು ಮಾಯೆಯೆಂಬರು, ಮಣ್ಣು ಮಾಯೆಯಲ್ಲ.*
*ಮನದ ಮುಂದಣ ಆಶೆಯೇ ಮಾಯೆ ಕಾಣಾ*
*ಗುಹೇಶ್ವರಾ.*

ಆಶೆ ಅಜ್ಞಾನಗಳೆ ಮಾಯೆಯೆಂಬುದು ಎಲ್ಲ ಶರಣರ ಮತ. ಪ್ರಾಯಶಃ ಜಗತ್ತಿನ ತತ್ವಶಾಸ್ತ್ರಕ್ಕೆ ವೀರಶೈವಧರ್ಮ ನೀಡಿರುವ ಮತ್ತೊಂದು ಅಪೂರ್ವ ಕೊಡುಗೆ ಇದೆಂದೇ ಹೇಳಬಹುದು. ಮಾನವನ ಜೀವನ ವಿಮುಖತೆಗೆ ಹಾಗೂ ಪ್ರಾಪಂಚಿಕ ದ್ವೇಷಕ್ಕೆ ಕಾರಣವಾಗಿ ಸಮಾಜವನ್ನು ಅವನತಿಯ ಕಡೆಗೆ ನೂಕುತ್ತಿದ್ದ ಸಂಪ್ರದಾಯಬದ್ಧವಾದ ಮಾಯೆಯ ಸ್ವರೂಪವನ್ನು ತಿದ್ದಿ, ಅದು ಮಾನವ ಮೋಹಿಸುವ ವಸ್ತುಗಳಲ್ಲಿಲ್ಲ, ಅವನ ಮನದಲ್ಲಿ ನಿಹಿತವಾಗಿದೆಯೆಂಬ ಸತ್ಯವನ್ನು ತೋರಿಸಿಕೊಟ್ಟವರು ಶಿವಶರಣರು.

ಮಾಯೆಯ ನಿಜವಾದ ಸ್ವರೂಪ ವೇದ್ಯವಾದ ನಂತರ ಶಿವನ ಲೀಲಾಭೂಮಿಯಾದ ಈ ಜಗತ್ತು ಮಾನವನ ಸಾಧನ ಕ್ಷೇತ್ರವೆಂಬ, ಇದನ್ನು ಪ್ರೀತಿಸಬೇಕೆಂಬ ಅರಿವು ಸಮಾಜದಲ್ಲಿ ಮೂಡದಿರದು.

*ಭೋಗ ಭೂಮಿಯ ಭೋಗ ತನುವಿನಲಾಗದನುಪಮ*
*ಸಿದ್ಧಿ ಕರ್ಮೋ*
*ದ್ಯೋಗ ಭೂಮಿಯ ಕರ್ಮ ತನುವಿನಲಲ್ಲದದರಿಂದ*
*ಯೋಗ ಯೋಗ್ಯರು ಯೋಚಿಸುತ ಭೂಭಾಗದೊಳು*
*ಮಾನವಶರೀರಗ*
*ಳಾಗಿ ಸಾಧಿಸಿ ನಿಜವನರಿವರು ಗಿರಿಜೆ ಕೇಳೆಂದ.*

ಈ ಶಿವಸತ್ಯವನ್ನರಿಯುವ ಅಪೇಕ್ಷೆಯುಳ್ಳವರು ಈ ಜಗತ್ತಿ ನಲ್ಲಿ ಜನ್ಮವೆತ್ತಬೇಕಾಗುತ್ತದೆನ್ನುವುದು ಚಾಮರಸ ಕವಿಯ ಸಿದ್ಧಾಂತ.

ವೈಚಾರಿಕತೆ ಆದಿ ವೀರಶೈವ ಧರ್ಮದ ಪ್ರಧಾನ ಲಕ್ಷಣ. ಬಾಹ್ಯಾಂತರ ಚಕ್ಷುಗಳಿಗೆ ಕಾಣದ್ದನ್ನದು ತಲೆಗಂಟಿಸಿಕೊಳ್ಳುವುದಿಲ್ಲ. ಭೂಮಿಯ ಹೊರಗಿನ ಅನ್ಯ ಪ್ರಪಂಚಗಳು ತನಗೆ ಕಾಣುವುದಿಲ್ಲವಾದ್ದರಿಂದ ವ್ಯರ್ಥಾಲೋಚನೆಯಲ್ಲಿ, ಅನರ್ಥಕಾರಿ ಕಲ್ಪನಾವಿಲಾಸದಲ್ಲಿ ಅದು ಕಾಲ ಕಳೆಯುವುದಿಲ್ಲ. ಸತ್ಯ ದರ್ಶನವೇ ಅದರ ಧ್ಯೇಯ. ಬೇರೆ ಧರ್ಮಗಳಲ್ಲಿ ವರ್ಣನೆಗೊಂಡಿರುವ ಸ್ವರ್ಗ ನರಕಗಳ ಕಲ್ಪನೆಗೂ ಇಲ್ಲಿ ಅವಕಾಶವಿಲ್ಲ. ಅವನ್ನು ನೋಡಿ ಬಂದವರು ಯಾರು? ಅವನ್ನು ಪ್ರತಿಮಾವಿಧಾನದಲ್ಲಿ ಅರ್ಥೈಸಿಕೊಳ್ಳಬೇಕೆಂದು ಹೇಳಬಹುದು. ಆದರೆ ಅಂಥ ಭ್ರಾಮಕ ಕಲ್ಪನೆಗಳಿಂದ ಮಾನವನ ಮನಸ್ಸು ಛಿದ್ರ ವಿಚ್ಛಿದ್ರವಾಗುತ್ತದಲ್ಲದೆ, ಅವನ ಆತ್ಮಶಕ್ತಿಯನ್ನು ಹಾನಿಗೊಳಿಸಿ, ಅವನನ್ನು ಸತ್ಯನಿಷ್ಠೆಯಿಂದ ಜಾರಿಸುತ್ತದೆ. ಕನಸಿನ ಗಂಟಿಗಿಂತ, ಕೈಯಲ್ಲಿರುವ ದಂಟೇ ಸತ್ಯ; ನಾಳಿನ ಕನಸಿಗಿಂತ ಇಂದಿನ ನನಸೇ ಸತ್ಯ. ಒಂದು ಪಕ್ಷ ಸ್ವರ್ಗವಿರುವುದಾದರೆ, ಇಲ್ಲಿ ಮಾಡಿದ ಪುಣ್ಯ ಅಲ್ಲಿಗೂ ಸಲ್ಲುತ್ತದೆ. ಮನೆ ಗೆದ್ದು ಮಾರು ಗೆಲ್ಲಬೇಕೆಂಬ ಗಾದೆಯಿದೆ. ಮನೆಯಲ್ಲಿ ಮನ್ನಣೆ ಪಡೆಯುವ ಮನುಷ್ಯ ಊರೊಳಗೂ ಮಾನ್ಯತೆ ಪಡೆಯುವ ಸಂಭವವುಂಟು; ಮನೆಯಲ್ಲಿಯೇ ಬೇಡವಾದವನು ಊರಿಗೂ ಬೇಡವಾದಾನು.

*ಮರ್ತ್ಯವೆಂಬುದು ಕರ್ತಾರನ ಕಮ್ಮಟವಯ್ಯಾ;*
*ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯಾ;*
*ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯಾ,*
*ಕೂಡಲ ಸಂಗಮದೇವಾ.*

ಈ ಪ್ರಪಂಚ ಮಾನವನ ಉಪಯೋಗಕ್ಕಾಗಿ, ಸಾಧನೆಗಾಗಿ, ಪರೀಕ್ಷೆಗಾಗಿ ಶಿವ ಸೃಷ್ಟಿಸಿರುವ ಟಂಕಸಾಲಿ ಅಥವಾ ಕರ್ಮಭೂಮಿ. ಇಲ್ಲಿ ಜಯಿಸದಿದ್ದರೆ ಅವನಿಗೆ ಬೇರೆಲ್ಲಿಯೂ ಜಯ ಲಭಿಸಲ್ಲು. 'ಕೊಟ್ಟ ಕುದುರೆಯನೇರಲರಿಯದೆ ಮತ್ತೊಂದು ಕುದುರೆಯ ಬಯಸುವವರು ವೀರರೂ ಅಲ್ಲ, ಧೀರರೂ ಅಲ್ಲ' ಎಂಬ ಪ್ರಭುದೇವರ ಮಾತು ಸಹ ಮೇಲಣ ಅಭಿಪ್ರಾಯಕ್ಕೆ ಉಪಷ್ಟಂಭಕವಾಗಿದೆ.

*ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ*
*ಕಾಣಿ ಭೋ!*
*ಸತ್ಯವ ನುಡಿವುದೆ ದೇವಲೋಕ; ಮಿಥ್ಯವ ನುಡಿವುದೆ*
*ಮರ್ತ್ಯಲೋಕ !*
*ಆಚಾರವೆ ಸ್ವರ್ಗ, ಅನಾಚಾರವೇ ನರಕ*
*ಕೂಡಲಸಂಗಮದೇವಾ, ನೀವೇ ಪ್ರಮಾಣು.*

ಮಾನವನಿದ್ದೆಡೆಯಲ್ಲಿಯೇ ಎರಡು ಲೋಕಗಳೂ ಇರುತ್ತವೆ; ಸತ್ಯ ಮಿಥ್ಯ ಆಚಾರ ಅನಾಚಾರ ಇವೇ ಇವುಗಳ ನಡುವಿರುವ ಅಂತರ. 'ಭಕ್ತನಂಗಳವೆ ವಾರಣಾಸಿ, ಕಾಯವೇ ಕೈಲಾಸ' ಎಂಬ ಉಪದೇಶವನ್ನು ಅರ್ಥಮಾಡಿಕೊಂಡ ಮಾನವನಲ್ಲಿ

ಆತ್ಮಸ್ಫೂರ್ತ ವಾಸ್ತವ ಪ್ರಜ್ಞೆ ಮತ್ತಿ ಸತ್ಯಶೋಧನಾನುರಕ್ತಿಗಳು ಬಲಿತು, ತಾನಾರೆಂಬುದನ್ನು ತಿಳಿದುಕೊಳ್ಳಲು ಅವನು ಸಮರ್ಥನಾಗುತ್ತಾನೆ. 'ಇಹಲೋಕ ಪರಲೋಕ ತಾನಿದ್ದಲ್ಲಿ, ಗಗನ ಮೇರು ಮಂದರ ತಾನಿದ್ದಲ್ಲಿ, ಸಕಲ ಭುವನ ತಾನಿದ್ದಲ್ಲಿ, ಸತ್ಯ ನಿತ್ಯ ನಿರಂಜನ ಶಿವತತ್ತ್ವ ತಾನಿದ್ದಲ್ಲಿ' ಎಂಬ ಪ್ರಜ್ಞೆ ಪ್ರಜ್ವಲಿಸಿದಾಗ, ಅವನು ಊರ್ಧ್ವಮುಖ ಯಾತ್ರೆ ಕೈಗೊಳ್ಳುತ್ತಾನೆ. ಇಹ-ಪರಗಳೆರಡರಲ್ಲಿಯೂ ಅವನ ಬದುಕು ಬೆಳಕಾಗುತ್ತದೆ. ಪ್ರಪಂಚ ಸಂಸ್ಥೆಯ ಭಿತ್ತಿಗಳನ್ನಲಂಕ ರಿಸಬೇಕಾದ ನಿತ್ಯ ಸತ್ಯ ಧ್ಯೇಯ ಸೂತ್ರಗಳು ಮೇಲಣ ವಚನಗಳಲ್ಲಿ ಅಡಕಗೊಂಡಿವೆ.

ಈ ಲೋಕದಲ್ಲಿ ಜನ್ಮವೆತ್ತಿದ ಮೇಲೆ ಬದುಕು ಸರಾಗ ವಾಗಿ, ಸುಖಮಯವಾಗಿ, ಹಿತಕರವಾಗಿ, ಅಡೆತಡೆಗಳಿಲ್ಲದೆ, ಕಷ್ಟಕಾರ್ಪಣ್ಯಗಳಿಲ್ಲದೆ, ಕ್ಲೇಷಸಂಕಟಗಳಿಲ್ಲದೆ ಸಾಗುತ್ತದೆಂದು ಹೇಳುವಂತಿಲ್ಲ. ಸಾಧನೆಯಿಲ್ಲದೆ, ಪರೀಕ್ಷೆಯಿಲ್ಲದೆ, ಸಮಸ್ಯೆ ಸವಾಲುಗಳಿಲ್ಲದೆ ಆಧ್ಯಾತ್ಮಿಕವಾಗಿ ಮಾತ್ರವಲ್ಲ, ಐಹಿಕ ವಾಗಿಯೂ ಸಹ ಯಾವ ವ್ಯಕ್ತಿಯೂ ಯಶಸ್ಸು ಪಡೆಯ ಲಾರ. ಆಧ್ಯಾತ್ಮ ಸಾಹಸಯಾತ್ರೆಯ ಮಾರ್ಗ ದೀರ್ಘ. ಪ್ರಯಾಸಕರ ಹಾಗೂ ಕಂಟಕಮಯ. ಅವನು ಬಾಹ್ಯ ಶತ್ರುಗಳನ್ನು ಮಾತ್ರವಲ್ಲ, ಅಂತಶ್ಶತ್ರುಗಳನ್ನು ಸಹ ಎದುರಿಸ ಬೇಕಾಗುತ್ತದೆ. ಅವೆಲ್ಲವನ್ನು ಗೆದ್ದಾಗಲೇ ಅವನಿಗೆ ಸಿದ್ಧಿ ಸಾಧ್ಯ.

*ಬೆಟ್ಟದ ಮೇಲೊಂದು ಮನೆಯ ಮಾಡಿ*
*ಮೃಗಗಳಿಗಂಜಿದಡೆಂತಯ್ಯ !*
*ಸಮುದ್ರದ ತಡಿಯಲ್ಲಿ ಮನೆಯ ಮಾಡಿ ನೊರೆತೊರ*
*ಗಳಿಗಂಜಿದಡೆಂತಯ್ಯ!*
*ಸಂತೆಯೊಳಗೊಂದು ಮನೆಯ ಮಾಡೀ, ಶಬ್ಧಕ್ಕೆ*
*ನಾಚಿದಡೆಂತಯ್ಯಾ!.*
*ಚೆನ್ನಮಲ್ಲಿಕಾರ್ಜುನದೇವ ಕೇಳಯ್ಯ,*
*ಲೋಕದೊಳಗೆ ಹುಟ್ಟಿರ್ದ ಬಳಿಕ, ಸ್ತುತಿನಿಂದೆಗಳು*
*ಬಂದಡೆ, ಮನದಲ್ಲಿ ಕೋಪವ ತಾಳದೆ ಸಮಾಧಾನಿ*
*ಯಾಗಿರಬೇಕು.*

ಮಹದೇವಿಯಕ್ಕನ ಜೀವನ ಪರಿಚಯವುಳ್ಳವರಿಗೆ ಇದೆಲ್ಲ ಅವಳ ಸ್ವಾನುಭವವೆಂದೇ ವೇದ್ಯವಾಗದಿರದು. ಜಗತ್ತಿನ ಸರ್ವ ಸಂತರ ಜೀವನದ ಸಾರವೇ ಇಲ್ಲಿ ಭಟ್ಟಿಯಿಳಿದಂತಿದೆ. ಇದೇ ನಿಜವಾದ ಸಂಸ್ಕೃತಿಯ ಜೀವಾಳ.

-ಮುಂದುವರೆಯುತ್ತದೆ.

## 'ಸಿದ್ಧಗಂಗಾ' ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

**'ಸಿದ್ಧಗಂಗಾ'** ಮುನ್ನಡೆಗೆ ಇರುವ ಆರ್ಥಿಕ ಪರಿಸ್ಥಿತಿ ಯನ್ನು ನಿಮ್ಮ ಗಮನಕ್ಕೆ ನಿವೇದಿಸಿಕೊಳ್ಳಲಾಗುತ್ತಿದೆ. ಈ ಸಮಸ್ಯೆಯನ್ನು ಮನಗಂಡು ಆಜೀವ ಸದಸ್ಯರು ಸ್ಪಂದಿಸಿ ಹೆಚ್ಚುವರಿ ಚಂದಾ ೫೦೦ ರೂ./೪೦೦ ರೂ. ಉದಾರತೆಯಿಂದ ಸಂದಾಯ ಮಾಡುತ್ತಿದ್ದಾರೆ. ಅವರಿಗೆ ಶ್ರೀಮಠದ ಪರವಾಗಿ ಧನ್ಯವಾದಗಳು.

ಸಂದಾಯ ಮಾಡದೆ ಇರುವವರಲ್ಲಿ ನಮ್ರ ವಿನಂತಿ ಏನೆಂದರೆ ಪ್ರಸ್ತುತವಿರುವ ಆಜೀವ ಚಂದಾ ೧೦೦೦/- ರೂ.ಗೆ. ಸರಿಹೊಂದುವಂತೆ ಉಳಿಕೆ ೫೦೦/- ರೂ./ ೪೦೦/- ರೂ. ಶೀಘ್ರವಾಗಿ ಸಂದಾಯ ಮಾಡಿ 'ಸಿದ್ಧಗಂಗಾ' ನಿರಂತರವಾಗಿ ಮುನ್ನಡೆಯಲು ಹರಸಿ ಹಾರೈಸಬೇಕಾಗಿ ಕೋರುತ್ತೇವೆ.

ತಮ್ಮ ವಿಳಾಸದಲ್ಲಿರುವ **LM** ನಂಬರ್ ಸೂಚಿಸಿ ಬಾಕಿ ಆಜೀವ ಚಂದಾವನ್ನು ನಗದು/ ಎಂ.ಓ/ ಚೆಕ್/ ಡಿ.ಡಿ. ಮೂಲಕ 'ಸಿದ್ಧಗಂಗಾ' ಮಾಸಪತ್ರಿಕೆ ಹೆಸರಿನಲ್ಲಿ ಈ ಕೆಳಗಿನ ವಿಳಾಸಕ್ಕೆ ದಯಮಾಡಿ ಕಳಿಸಲು ವಿನಂತಿಸಿಕೊಳ್ಳಲಾಗಿದೆ.

ನಿಮ್ಮ ವಿಳಾಸ ಬದಲಾದಾಗ ನಿಮಗೆ ಕೊಟ್ಟಿರುವ ಆಜೀವ ಸದಸ್ಯತ್ವದ ನಂಬರನ್ನು ತಪ್ಪದೆ ತಿಳಿಸಿರಿ. ಇದರಿಂದ ನೇರವಾಗಿ ಪತ್ರಿಕೆ ನಿಮಗೆ ತಲುಪಲು ಸಾಧ್ಯವಾಗುತ್ತದೆ. ಆಗಾಗ್ಗೆ ಬದಲಾಗುವ ನಿಮ್ಮ ಹೊಸ ವಿಳಾಸವನ್ನು ಪತ್ರಿಕಾ ಕಾರ್ಯಾಲಯಕ್ಕೆ ತಿಳಿಸಲು ಕೋರಲಾಗಿದೆ.

ಪ್ರಕಾಶಕರು
'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪.





## ವಚನಗಳಲ್ಲಿ ವೈಜ್ಞಾನಿಕ ಅಂಶಗಳು

-ಮುಂದುವರೆದ ಲೇಖನ

-ಡಾ॥ ವ್ಹಿ.ವ್ಹಿ. ಬಾಗಲಕೋಟಿ, ವಿಶ್ವಚೇತನ ಪ್ರಕಾಶನ, ಕಲ್ಯಾಣ್ ಹೌಸಿಂಗ ಕಾಲೋನಿ, ಗೋಕಾಕ-೫೯೧೩೦೭.

### ದೇವರ ಕಲ್ಪನೆ ಅಕ್ಕಮಹಾದೇವಿಯವರ ವಚನದಲ್ಲಿ

ದೇವನ ಸುಂದರವಾದ, ಹಾಗೂ ನೈಜತೆಗೆ ಅತಿ ಸಮೀಪವಾದ ಕಲ್ಪನೆಯನ್ನು ಅಕ್ಕಮಹಾದೇವಿಯರು, ಕೆಳಗಿರುವ ತಮ್ಮ ವಚನದಲ್ಲಿ ಮೂಡಿಸಿದ್ದಾರೆ.

*ಸಾವಿಲ್ಲದ, ಕೇಡಿಲ್ಲದ, ರೂಹಿಲ್ಲದ, ಚಲುವಂಗೆ*
*ನಾನೊಲಿದೆ*
*ಎಡೆಯಿಲ್ಲದ, ಕಡೆಯಿಲ್ಲದ, ತೆರಹಿಲ್ಲದ, ಕುರುಹಿಲ್ಲದ*
*ಚಲುವಂಗೆ ನಾನೊಲಿದೆ ಅವ್ವಗಳಿರಾ!*
*ಭವವಿಲ್ಲದ ಭಯವಿಲ್ಲದ ನಿರ್ಭಯ ಚಲುವಂಗೊಲಿದೆ*
*ನಾನು ಸೀಮೆಯಿಲ್ಲದ ನಿಸ್ಸೀಮಂಗೊಲಿದೆ ನಾನು*
*ಚೆನ್ನಮಲ್ಲಿಕಾರ್ಜುನನೆಂಬ ಗಂಡಂಗೆ*
*ಮಿಗೆ ಮಿಗೆ ಒಲಿದೆ ಎಲೆ ಅವ್ವಗಳಿರಾ.*

ದೇವನ ಗುಣ ವಿಶೇಷಗಳನ್ನು ಒಂದೊಂದಾಗಿ ಸರಳ ಶಬ್ಧಗಳಲ್ಲಿ ಸ್ಪಷ್ಟಪಡಿಸಿದ್ದಾರೆ ಅಕ್ಕನವರು. ಸಾವಿಲ್ಲದ. ಎನ್ನುವಲ್ಲಿ ದೇವನ ಅಸ್ತಿತ್ವವು ಅನಂತ ಕಾಲವೆಂದು ಸೂಚಿಸಿದ್ದಾರೆ. ಮಾನವ ಸಹಿತ ಪ್ರಾಣಿ ಮತ್ತು ಸಸ್ಯ ಜೀವರಾಶಿಗಳೆಲ್ಲವುಗಳಿಗೂ ಸೀಮಿತ ಆಯುಷ್ಯಗಳಿವೆ. ಪ್ರಾಣಿಗಳಲ್ಲಿ ಮಾನವನಿಗೆ ೧೦೦-೧೫೦ ವರ್ಷಗಳ ಆಯುಷ್ಯವಿದೆ ಎನ್ನಬಹುದು. ಅದಲ್ಲದೆ ಸಸ್ಯಗಳಲ್ಲಿ ೫೦೦ಕ್ಕೂ ಹೆಚ್ಚಿನ ವರ್ಷಗಳ ಆಯುಷ್ಯದ ಮರಗಳಿವೆ ಎನ್ನುತ್ತಾರೆ. ಸಹಸ್ರ ವರ್ಷಗಳವರೆಗೂ ಇರಬಹುದು. ಆದರೆ ವಿಶ್ವದ ಕಣ್ಣುಗಳಂತಿರುವ ನಕ್ಷತ್ರಗಳ ಆಯುಸ್ಸುಗಳು ಬಹುದೊಡ್ಡವು. ನಕ್ಷತ್ರಗಳಲ್ಲಿ ಒಂದಾದ ನಮ್ಮ ಸೂರ್ಯನ ಸದ್ಯದ ವಯಸ್ಸು ೪.೭(ಬಿಲಿಯನ್) ಸಹಸ್ರ ದಶಲಕ್ಷ ವರ್ಷಗಳು. ಅದು ಇನ್ನೂ ೫ರಿಂದ ೬ ಬಿಲಿಯನ್ ವರ್ಷಗಳಷ್ಟು ಕಾಲ ಜೀವಂತವಾಗಿರುತ್ತದೆ. ಅಂದಾದ ಮೇಲೆ ವಿಶ್ವದ ಭಾಗ ಒಂದರ ಆಯು ಎಷ್ಟೆಂದರೆ ಮಾನವ ಕುಲದ ಸಹಸ್ರಾರು ತಲೆಮಾರುಗಳು ನಶಿಸಿದರೂ ದೇವನಿದ್ದೇ ಇದ್ದಾನೆ ಎಂದರೆ ಅವನಿಗೆ ಅಕ್ಕನು ಹೇಳಿದಂತೆ ಸಾವಿಲ್ಲ.

ಕೇಡಿಲ್ಲದ ಎಂದಿದ್ದಾಳೆ ಅಕ್ಕ. ಸಕಲ ಜೀವಾತ್ಮಗಳಿಗೆ ದೇವನು ಪೋಷಕನಾಗಿರುವನೆಂದೂ, ಅದು ನಕ್ಷತ್ರಗಳು ಪ್ರಸರಣಗೊಳಿಸುತ್ತಿರುವ ಶಕ್ತಿಯಿಂದ ಎಂದೂ, ಹಿಂದಿನ ಅಧ್ಯಾಯದಲ್ಲಿ ಹೇಳಿದ್ದಾಗಿದೆ. ಎಲ್ಲವನ್ನೂ ಪೋಷಿಸಿ ರಕ್ಷಿಸುತ್ತಿರುವಾಗ ಕೇಡೆಲ್ಲಿಂದ ಬಂತು? ಇವುಗಳಿಂದ ದೇವನ ಅಸ್ತಿತ್ವವು ಶತಃಸಿದ್ಧವಾದರೂ, ನಿರ್ದಿಷ್ಟ ರೂಪವಿಲ್ಲ. ಅಂದರೆ ನಿರಾಕಾರ ಸರ್ವಂತರ್ಯಾಮಿ ಯಾಗಿದ್ದು ವಿಶಿಷ್ಟ ಗುರುತೆಂಬುದೆನ್ನು ಹೇಳುವಂತಿಲ್ಲ. ಅಕ್ಕನವರು ವಚನದಲ್ಲಿ ಚಲುವಂಗೆ ನಾನೊಲಿದೆ ಎನ್ನುವಲ್ಲಿ ಶಿವಂ ಸುಂದರಂ ಎಂಬ ಭಾವವಿದ್ದು, ಅದರಲ್ಲಿ ತನ್ನ ಮನವೆಲ್ಲವನ್ನು ಸಿಲುಕಿಸಿದ್ದೇನೆ ಎಂದಿದ್ದಾಳೆ.

ಎಡೆಯಿಲ್ಲದ, ಕಡೆಯಿಲ್ಲದ ತೆರಹಿಲ್ಲದ ಎನ್ನುವಲ್ಲಿ ನಿರ್ದಿಷ್ಟ ಸ್ಥಾನವಿಲ್ಲದಿದ್ದರೂ ಅನಂತವಾಗಿರುವ, ಸೀಮೆ ರಹಿತ ಅವಕಾಶದಲ್ಲಿ, ಹೋಲಿಕೆಗೆ ಇನ್ನೊಂದು ಸಿಗ ಲಾರದ ಸುಂದರನಲ್ಲಿ ನನ್ನೊಲುಮೆ ಇದೆ ಎಂದಿದ್ದಾಳೆ.

ನನ್ನ ನಲ್ಲನಾದ ದೇವನಿಗೆ ಹುಟ್ಟು ಸಾವುಗಳಿಲ್ಲ. ಭಯದ ಮಾತಂತೂ ದೇವನಿಗೆ ಬಹುದೂರ.

ಇಷ್ಟೆಲ್ಲ ಅನನ್ಯ ಸದ್ಗುಣಗಳನ್ನು ಹೊಂದಿದ ದೇವನನ್ನು ಗಂಡನೆಂದು, ಉಳಿದೆಲ್ಲ ಸಂಬಂಧಗಳನ್ನು ಬಿಟ್ಟು ತಿಳಿದದ್ದು ಏಕೆ? ಎಂಬ ಪ್ರಶ್ನೆಯೂ ಉದ್ಭವಿಸುವುದುಂಟು. ಇನ್ನುಳಿದ ಸಂಬಂಧಗಳಾದ ತಂದೆ, ತಾಯಿ, ಅಕ್ಕ, ತಂಗಿ, ಅಣ್ಣ, ತಮ್ಮ, ಮೈದುನ ಇತ್ಯಾದಿ ಇತ್ಯಾದಿಗಳನ್ನು ಪರಿಶೀಲಿಸಿದಾಗ, ಗಂಡ ಹೆಂಡತಿ ಇವರುಗಳ ಸಂಬಂಧ ದಲ್ಲಿಯ ಅನ್ಯೋನ್ಯತೆ ಇನ್ನುಳಿದ ಸಂಬಂಧಗಳಲ್ಲಿ ಸಿಗುವುದಿಲ್ಲ. ಉಳಿದವರು ಕೆಲಕಾಲ ಕೂಡಿ ಅಗಲುವರು. ಗಂಡಹೆಂಡಿರ ನಡುವಿನ ಸಂಬಂಧದ ಕಾಲಾವಧಿ ಹೆಚ್ಚು. ಇಲ್ಲಿ ಪರಸ್ಪರರ ಬಗೆಗಿನ ಜವಾಬ್ದಾರಿಯೂ ಹೆಚ್ಚು. ಇಲ್ಲಿ ಗಂಡನು ರಕ್ಷಿಸಬೇಕು, ಪೋಷಿಸಬೇಕು, ಹೆಂಡತಿ ಸೇವೆ ಸಲ್ಲಿಸಬೇಕು. ಹೀಗೆ ಪರಸ್ಪರ ಸಹಕಾರದಿಂದ ಬದುಕಿನ ರಥ ಸಾಗಿಸಬೇಕು. ಎಲ್ಲ ಸಂಬಂಧಗಳಿಗಿಂತ ಗಂಡ ಹೆಂಡಿರ ಸಂಬಂಧ ವಿಶಿಷ್ಟವಾಗಿರುವ ಕಾರಣ, ಅಕ್ಕನವರು ಆಯ್ಕೆ ಮಾಡಿದ್ದು, ದೇವನು ಗಂಡನೆಂಬ ಸಂಬಂಧವನ್ನು ವಚನದಲ್ಲಿ ಆಯ್ಕೆಗೆ ಕಾರಣಗಳನ್ನು ಹೇಳುತಾ, ದೇವನ ಗುಣ ವಿಶೇಷಗಳನ್ನು ತಿಳಿಸಿದ್ದಾಳೆ ಮಹಾದೇವಿಯಕ್ಕ.

**ಅಕ್ಕಮಹಾದೇವಿಯವರ ವಚನದಲ್ಲಿ ದೇವನ ಕಲ್ಪನೆ ಹಾಗೂ ಸರ್ವಜ್ಞನ ವಿಚಾರ :**

ಅಕ್ಕನವರು ದೇವನ ಇನ್ನೊಂದು ಗುಣ ವಿಶೇಷವನ್ನು ವಿವರಿಸಿದ ವಚನವು ಇಂತಿದೆ.

*ಈಳೆ ನಿಂಬೆ ಮಾವು ಮಾದಲಕ್ಕೆ*
*ಹುಳಿನೀರ ನೆರೆದವರಾರಯ್ಯಾ ?*
*ಕಬ್ಬು ಬಾಳೆ ಹಲಸು ನಾರಿವಾಳಕ್ಕೆ*
*ಸಿಹಿನೀರನೆರೆದವರಾರಯ್ಯಾ ?*
*ಕಳವೆ ರಾಜಾನ್ನ ಶಾಲ್ಯನ್ನಕ್ಕೆ,*
*ಓಗರದ ಉದಕವ ನೆರೆದವರಾರಯ್ಯ ?*
*ಮರುಗಮಲ್ಲಿಗೆ ಪಚ್ಚೆ ಮುಡಿವಾಳಕ್ಕೆ,*
*ಪರಿಮಳದುದಕವನೆರೆದವರಾರಯ್ಯ?*
*ಇಂತೀ ಜಲವು ಒಂದೆ,*
*ನೆಲನು ಒಂದೆ, ಆಕಾಶವು ಒಂದೆ,*
*ಜಲವು ಹಲವು ದ್ರವ್ಯಂಗಳ ಹಾಗೆ,*
*ಎನ್ನದೇವ ಚೆನ್ನಮಲ್ಲಿಕಾರ್ಜುನಯ್ಯನು,*
*ಹಲವು ಜಗಂಗಳ ಕೂಡಿಕೊಂಡಿರ್ದುದೊಡೇನು?*
*ತನ್ನ ಪರಿ ಬೇರೆ.*

ಇಲ್ಲಿ ದೇವನನ್ನು ಬೇರೆ ಬೇರೆಯವರು ತಮ್ಮ ದೃಷ್ಟಿಕೋನಗಳಿಂದ ಬೇರೆ ಬೇರೆಯಾಗಿ ಕಂಡರೇನು? ಅಥವಾ ಬೇರೆ ಬೇರೆ ಜಗತ್ತುಗಳಲ್ಲಿದ್ದರೇನು ಅವನ ವ್ಯಕ್ತಿತ್ವ, ವಿಶಿಷ್ಟ ಹಾಗೂ ಏಕೈಕ. ಉದಾಹರಣೆಗಾಗಿ ದೇವನನ್ನು ಬೇರೆ ಬೇರೆ ಶಕ್ತಿಗಳಾದ ವಿದ್ಯೆ, ಸಂಪತ್ತು, ವಿಘ್ನನಾಶಕತೆ ಸೃಷ್ಟಿ ರಕ್ಷಣೆ ನಾಶ ಇತ್ಯಾದಿಗಳಲ್ಲಿ ಬೇರೆ ಬೇರೆ ಜನರು ತಮ್ಮ ದೃಷ್ಟಿಕೋನದಲ್ಲಿ ಕಂಡರೂ, ದೇವನಿಗಿರುವುದು ಅವನದೇ ಆದ ವಿಶಿಷ್ಟ ವ್ಯಕ್ತಿತ್ವ.

ಇದೇ ವಿಚಾರವನ್ನು ವಿವರಿಸಲಿಕ್ಕೆ ರಸಾಯನ ಶಾಸ್ತ್ರದಲ್ಲಿ ನಾವು ಈಗ ಕಲಿಯುವ ಒಂದು ಚಿಕ್ಕ ಉದಾಹರಣೆಯನ್ನು ಕೊಡುತ್ತಾಳೆ ಅಕ್ಕನವರು. ಜಲದಲ್ಲಿ ಯಾವ ಬಣ್ಣವನ್ನು ಹಾಕುತ್ತೀರೋ ಅದೇ ದ್ರವ್ಯವಾಗಿ ಕಂಡರೂ ಜಲವು ತನ್ನದೇ ಆದ ಅಸ್ತಿತ್ವವನ್ನು ಹೊಂದಿರುತ್ತದೆ. ಇವಲ್ಲದೆ ರುಚಿಗಳ ಉದಾಹರಣೆಗಳನ್ನೂ ಕೊಟ್ಟಿದ್ದಾರೆ. ಹುಳಿ, ಸಿಹಿ, ಓಗರ, ಪರಿಮಳ ಇತ್ಯಾದಿ ವಿಭಿನ್ನ ರುಚಿ ಪರಿಮಳಗಳನ್ನು ಹೊಂದಿದ ಸಸ್ಯಗಳು ಬೆಳೆಯುವುದು ಒಂದೇ ಜಲ, ನೆಲ, ಆಕಾಶದಿಂದ, ಫಲಗಳಲ್ಲಿ ವಂಶವಾಹಿನಿಗಳಿಂದ, ಭಿನ್ನವಾದ ಗುಣಗಳಿದ್ದರೂ ಮೂಲಭೂತವಾಗಿ ಅವುಗಳ ಬೆಳವಣಿಗೆಗಳಿಗೆ ಅವಶ್ಯಕವಾದ ನೀರು ಭೂಮಿ ಆಕಾಶ ಎಲ್ಲವೂ ಒಂದೇ ಎಂಬ ಉದಾಹರಣೆಯನ್ನು ದೇವನ ವಿಷಯದಲ್ಲಿ ಹೇಳಿದ್ದಾರೆ ಅಕ್ಕನವರು.

ಇನ್ನು ಸರ್ವಜ್ಞ ಕವಿಯು, ದೇವನ ಬಗೆಗಿರುವ ಕಲ್ಪನೆಯು ಕ್ರಾಂತಿಕಾರಕವಾಗಿ ವ್ಯವಹಾರಿಕವಾಗಿದ್ದು ಜೀವನಕ್ಕೆ ಅತೀ ಹತ್ತಿರವಾಗಿದೆ ಅವನು ಹೇಳುವುದು.

ಅನ್ನದೇವರ ಮುಂದೆ ಇನ್ನು ದೇವರುಂಟೆ? ಇಲ್ಲಿ ವ್ಯವಹಾರ ಜ್ಞಾನವು ಎದ್ದು ಕಾಣುತ್ತಿದ್ದರೂ, ಸರ್ವಜ್ಞನು ದೇವರೆಂದು ಪರಿಗಣಿಸುತ್ತಿರುವ ಅನ್ನವನ್ನು ಕೊಡುವವನೂ ಆ ಮಹಾ ಸರ್ವವ್ಯಾಪಿ ದೇವನೆಂಬುದನ್ನು ನೆನಪಿಸಬಹುದು.

-ಮುಂದುವರೆಯುತ್ತದೆ.

## ಕರಾವಳಿ ಸಾಂಸ್ಕೃತಿಕ ಪ್ರತಿಷ್ಠಾನ(ರಿ.), ಕಾಸರಗೋಡು.

ಕರಾವಳಿ ಸಾಂಸ್ಕೃತಿಕ ಪ್ರತಿಷ್ಠಾನ(ರಿ.), ಕಾಸರಗೋಡು ಇದರ ೧೯ನೆಯ ಸಂಸ್ಥಾಪನಾ ವರ್ಷಾಚರಣೆಯ ಪ್ರಯುಕ್ತ ೨೦೦೯ರ ಅವಧಿಯಲ್ಲಿ ಕೊಚ್ಚಿನ್-ಎರ್ನಾಕುಲಂ ಅಥವಾ ಕೇರಳ ರಾಜ್ಯದ ರಾಜಧಾನಿ ತಿರುವನಂತಪುರದಲ್ಲಿ **ಕೇರಳ ರಾಜ್ಯ ೪ನೆಯ ಕನ್ನಡ ಸಮ್ಮೇಳನ-೨೦೦೯ ಮತ್ತು ಕೇರಳ ಕರ್ನಾಟಕ ಉತ್ಸವ**ವನ್ನು ಏರ್ಪಡಿಸಲು ನಿರ್ಧರಿಸಲಾಗಿದೆ. ಕೇರಳ ರಾಜ್ಯ ಕನ್ನಡ ಸಮ್ಮೇಳನ ದಲ್ಲಿ ಅಂತಾರಾಜ್ಯದ ಕವಿಗಳು, ಲೇಖಕರು, ಸಾಹಿತಿಗಳು, ಕಲಾವಿದರು, ಚಲನಚಿತ್ರನಟರು, ಮಾಧ್ಯಮದವರು, ಸಾಂಸ್ಕೃತಿಕ ರಾಯಭಾರಿಗಳು, ಶಿಕ್ಷಣತಜ್ಞರು, ಅಧ್ಯಾಪಕರು, ವಿದ್ಯಾರ್ಥಿಗಳು, ಕನ್ನಡಾಭಿಮಾನಿಗಳು ಹಾಗೂ ಕನ್ನಡ ಸಂಘ ಸಂಸ್ಥೆಗಳ ಪದಾಧಿಕಾರಿಗಳು ಬೃಹತ್ ಸಂಖ್ಯೆಯಲ್ಲಿ ಪಾಲ್ಗೊಳ್ಳಲಿದ್ದಾರೆ. ಎರಡು ದಿನ ವೈವಿಧ್ಯಮಯವಾದ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಉಚಿತವಾಗಿ ನೀಡಲಿಚ್ಛಿಸು ವವರು ಹಾಗೂ ರಾಜ್ಯ ಮಟ್ಟದ ವಿಚಾರಗೋಷ್ಠಿ ಕವಿಗೋಷ್ಠಿಗಳಲ್ಲಿ ಭಾಗವಹಿಸಲಿಚ್ಛಿಸುವವರು ಮತ್ತು ಅಂತಾರಾಜ್ಯದಿಂದ ಪ್ರತಿನಿಧಿ,ಗಳಾಗಿ ಪಾಲ್ಗೊಳ್ಳುವವರಿಗೆ ಊಟೋಪಾಚಾರದ ವ್ಯವಸ್ಥೆ ಮಾಡಲಾಗುವುದು. ಪ್ರಯಾಣ ವೆಚ್ಚವನ್ನು ತಾವೇ ಭರಿಸಬೇಕು.

ಹೆಚ್ಚಿನ ಮಾಹಿತಿಗಾಗಿ ಅಧ್ಯಕ್ಷರು, ಕರಾವಳಿ ಸಾಂಸ್ಕೃತಿಕ ಪ್ರತಿಷ್ಠಾನ (ರಿ.) ಕಾಸರಗೋಡು, ಪಾರೆಕಟ್ಟೆ ರಸ್ತೆ, ಅಂಚೆ ರಾಮದಾಸ ನಗರ, ಕಾಸರಗೋಡು-೬೭೧ ೧೨೪, ದೂರವಾಣಿ: ೦೪೯೯೪-೨೨೭೯೧೧, ಮೊ: ೯೪೪೪೮೫೨೦೧೬ ಈ ವಿಳಾಸಕ್ಕೆ ಪತ್ರಮುಖೇನ ಸಂಪರ್ಕಿಸಲು ವಿನಂತಿಸಲಾಗಿದೆ.

-ಶಿವರಾಮ ಕಾಸರಗೋಡು
ಅಧ್ಯಕ್ಷರು





# ಕಾಲಾತೀತ, ಉಪಮಾತೀತ 'ಬಸವಣ್ಣ' ಮಹಾ ಮಾನವತಾವಾದಿ

-ಸ.ರಾ. ಸುಳಕೂಡೆ, ೧೩೪೯, ಶ್ರೀ ಬಸವೇಶ್ವರ ಬಡಾವಣೆ, 'ಶಿವಪ್ರಸಾದ' ರಾಮತೀರ್ಥನಗರ, ಬೆಳಗಾವಿ- ೫೯೦೦೧೬

ಜಗತ್ತಿನ ಅವಿರಳ ಜ್ಞಾನವನ್ನು ಸಮಾಜದ ಕಟ್ಟ ಕಡೆಯ ಮನುಷ್ಯನಿಂದ ಹೊರಹೊಮ್ಮಿದ 'ಬಸವಣ್ಣ' ಬದುಕಿನ ವೈಭವದ ಸೂತ್ರಕಾರ. ಸರ್ವಕಾಲಿಕ ಸತ್ವವನ್ನು ಆನಂದಿಸಿರುವಂತೆ ಸಮಾಜ ರಚನೆ ಮಾಡಿದ 'ಬಸವಣ್ಣ' 'ಅರಿವೇ ಗುರು'ವೆಂದು ಸಾರಿದ್ದು ವಿಚಾರ ಕ್ರಾಂತಿಯ ಮೂಲ ಬೀಜದಂತಿದೆ. ಬಸವಣ್ಣನವರು ಮಾನವ ಮೌಲ್ಯಗಳ ಹರಿಕಾರರಾಗಿದ್ದಾರೆ. ಅವರು ಹೊಸ ಸಮಾಜದ ರೂವಾರಿಗಳಾಗಿಯೂ ಇಂದಿಗೂ ಪ್ರಸ್ತುತರಾಗಿದ್ದಾರೆ. ವಿನಯಶೀಲತೆ, ದಯಾಪರತೆ, ಎನಗಿಂತ ಕಿರಿಯರಿಲ್ಲೆಂಬ ಸದ್ಭಾವ ಮಾನವ ಪ್ರೀತಿಯ ತೊರೆಗಳಾಗಿವೆ. ಸಮ್ರಾಜ್ಯ ಎಲ್ಲ ಸ್ತರದ ಜನರೊಂದಿಗೆ ಒಡನಾಡಿದ ಬಸವಣ್ಣನವರು 'ಮಹಾ ಮಾನವತಾವಾದಿ'ಯ ಸಕಲ ಗುಣಗಳನ್ನು ಹೊಂದಿ ಇಂದಿನ ಸಾಮಾಜಿಕ ಪಿಡುಗು ಬಿಡಿಸಿಕೊಳ್ಳಲು ಸಹ ಮಾರ್ಗದರ್ಶಕರಾಗಿದ್ದಾರೆ. ಅವರ ಮಹಾ ಮಾನವತಾವಾದದ ಅಲಿಲು ಜಗತ್ತಿನ ಯಾವ ನೆಲೆಯಲ್ಲೂ ಕಂಡರಿಯದ ಸನ್ನಿವೇಶವಾಗಿದೆ.

*ಅಪ್ಪನು ನಮ್ಮ ಮಾದಾರ ಚೆನ್ನಯ್ಯ ;*
*ಬೊಪ್ಪನು ನಮ್ಮ ಡೋಹರ ಕಕ್ಕಯ್ಯ ;*
*ಚಿಕ್ಕಯ್ಯ ನೆಮ್ಮಯ್ಯ ಕಾಣಯ್ಯ ;*
*ಅಣ್ಣನು ನಮ್ಮ ಕಿನ್ನರ ಬೊಮ್ಮಯ್ಯ ;*
*ಎನ್ನನೇತಕ್ಕರಿಯಿರಿ, ಕೂಡಲ ಸಂಗಯ್ಯ ?*

ಬಸವಣ್ಣನವರು ಸಮಾಜದಲ್ಲಿ ಸಮ್ಮಿಳಿತಗೊಂಡು ಸಕಲರ ಶ್ರೇಯಸ್ಸಿಗಾಗಿ ಶ್ರಮಿಸಿದರು. ಅವರು ಮಾನವ ಪ್ರೀತಿಗೆ ತೊಡಕು ಮಾಡುತ್ತಿದ್ದ ಜಾತಿ ಭೇದ, ಲಿಂಗ ಭೇದ, ಕುಲ ಭೇದ, ಸಂಪತ್ತಿನ ಭೇದ.... ಅಷ್ಟ ಮದಗಳಲ್ಲವನ್ನು ಹೊರದಬ್ಬಿ ಇವನಮ್ಮವ, ಇವನಮ್ಮವನೆಂದು ಅಪ್ಪಿಕೊಳ್ಳುವ ಮಹಾ ಸಾಧನೆ ಮಾಡಿ ತೋರಿಸಿದ ಧೀರರಾಗಿದ್ದಾರೆ. ಮಾನವ ಕಳಕಳಿಯ ಮಹೋನ್ನತ ಸಾಧನೆ ಮಾಡಬಯಸುವವರೆಲ್ಲರೂ ಬಸವಣ್ಣನವರ ವಿಚಾರ ಆಚಾರ ರೂಢಿಸಿಕೊಳ್ಳುವ ಅನಿವಾರ್ಯತೆ ಇದೆ.

*ತನು ಗುರುವಿನಲಿ ಸವೆದು, ಮನ ಲಿಂಗದಲ್ಲಿ ಸವೆದು*
*ಧನ ಜಂಗಮದಲ್ಲಿ ಸವೆದು*
*ತನುವೆ ಗುರುವಾಗಿ ಮನವೆ ಲಿಂಗವಾಗಿ*
*ಧನವೇ ಜಂಗಮವಾಗಿ*
*ತ್ರಿವಿಧವೂ ಐಕ್ಯವಾಗಿ ನಿಂದಲ್ಲಿ ನಿಜಭರಿತನಾಗಿ*
*ಕಾಯವಿಡಿದು ಕರ್ಮವಿರಹಿತನಾಗಿ*
*ಕೂಡಲಚೆನ್ನಸಂಗನಲ್ಲಿ ಬಸವಣ್ಣನು*
*ಉಪಮಾತೀತನಾಗಿರ್ದನು*

ಬಸವಣ್ಣನಿಗೆ ಯಾರು ಸಾಟಿ? ಎಂಬ ಹುಡುಕಾಟದಲ್ಲಿ ಎದುರಾಗುವುದು ಬಸವಣ್ಣನೆ! ಬಸವಣ್ಣನು ೧೨ನೆಯ ಶತಮಾನದಲ್ಲಿ 'ಮಾನವ ಬದುಕನ್ನು ಮಹೋನ್ನತಿಗೇರಿಸಿದ ಪರಿ ಜಗತ್ತಿನ ಯಾವುದೇ ನೆಲೆಯೊಳಗೆ ಸಿಗಲಾರದ, ಎರಿರಲಾರದ ಸಂದರ್ಭವೆಂದು ಹೇಳಬಹುದಾಗಿದೆ.

ವಾಸ್ತವ ಬದುಕೇ ಸರ್ವಶ್ರೇಷ್ಠವೆಂಬುದನ್ನು ಸಾರ್ವತ್ರಿಕಗೊಳಿಸಿದ ಬಸವಣ್ಣ, ದೇವಲೋಕ, ಮರ್ತ್ಯಲೋಕ ಬೇರಿಲ್ಲ ಸತ್ಯ ನುಡಿವುದೇ ದೇವಲೋಕ, ಮಿಥ್ಯ ನುಡಿವುದೇ ಮರ್ತ್ಯಲೋಕವೆಂಬುವಷ್ಟು ಸರಳೀಕರಿಸಿರುವುದು ಸತ್ಯ ಲೋಕದ ಸಾಧನೆಯೇ ಆಗಿದೆ.

'ಬಸವಣ್ಣನವರ ಹೆಗ್ಗಳಿಕೆ ಗುರುತಿಸಿಕೊಂಡು ನಡೆಯುವಷ್ಟು ಮನುಷ್ಯನ ಮನಸ್ಸು ಹಟಗೊಂಡು ಹರವಿಕೊಂಡಿಲ್ಲದ ಕಾರಣ ಇಂದಿಗೂ ಮನುಜ-ಮನುಜರಲ್ಲಿಯ ಸಾಮರಸ್ಯಭಾವ ಸಹಜಗೊಂಡಿಲ್ಲವೆಂದು ಹೇಳಬಹುದು. ಬಸವಣ್ಣನವರ ಆಧ್ಯಾತ್ಮಿಕ ಕ್ರಾಂತಿ ಮತ್ತು ಅನುಭಾವದ ಸಾಹಿತ್ಯದ ಪ್ರಸಾರದ ಆಳ-ಉತ್ತರಗಳನ್ನು ಅರಿತುಕೊಂಡ ಅಂದಿನ ಜನ ಬೆರೆತು ಬಾಳಿದ್ದು ಸಾಮರಸ್ಯ ಬದುಕಿನ ಉತ್ತುಂಗವೇ ಆಗಿದೆ. ಬಸವಣ್ಣನವರ ಸಾಧನೆಯನ್ನು ಬಣ್ಣಿಸುವುದು ಅಸಾಧ್ಯವೆಂದ ಅಂದಿನ ಶರಣರು ನುಡಿದ ವಚನಗಳೆಲ್ಲವೂ ಮನನ ಯೋಗ್ಯವಾಗಿವೆ.

*ಭಕ್ತಿಯ ಹುಳ್ಳಗಳವ ಮರ್ತ್ಯಲೋಕದಲ್ಲಿ ಹರಹಲೆಂದು*
*ಬಂದನಯ್ಯ ಬಸವಣ್ಣನು*
*ಆಚಾರದ ಶಿವಾಚಾರದ ಮುಂದಣ ಕನ್ನಡಕವ ಕಳೆದು*
*ಕರತಳಾಮಳಕವ ಮಾಡಿದನಯ್ಯ ಬಸವಣ್ಣನು*
*ಪರವಾದಿ ಬಿಜ್ಜಳನು ಒರೆಗಲ್ಲ ಹಿಡಿದು ಶಿವಭಕ್ತಿಯ*
*ಸಂಪಾದನೆಯ ಮಾಡುವಲ್ಲಿ*
*ಮೂವತ್ತಾರು ಕೊಂಡೆಯವ ಪರಿಹರಿಸಿ*
*ಶಿವಾಚಾರದ ಧ್ವಜವನೆತ್ತಿಸಿದನಯ್ಯ ಬಸವಣ್ಣನು*

*ಕೂಡಲಚೆನ್ನಸಂಗಮದೇವರಲ್ಲಿ ಬಸವಣ್ಣನ ನಿಲವ ಹೊಗಳುವರೆ*
*ಎನ್ನಳವಲ್ಲ, ನಿನ್ನಳವಲ್ಲ ಕೇಳಾ ಪ್ರಭುವೆ !*

ಬದುಕಿಗೆ ಭಾವ ಶಕ್ತಿಯನ್ನು ತುಂಬಿ ಅನುಭಾವದ ಅನೇಕ ಆಯಾಮಗಳನ್ನು ಜಗತ್ತಿಗೆ ಸಾರುವಂತೆ ಸಾವಿರಾರು ಅನುಭಾವಿಗಳನ್ನು ನೀಡಿದ 'ಬಸವಣ್ಣ' ಎಲ್ಲರಲ್ಲೂ ಸಂಗಮನಾಥನ ಕಂಡ ಮಹಾನುಭಾವನಾಗಿದ್ದಾರೆ. ಜಗತ್ತು ಹಲವು ಜಂಜಡಗಳ ಕಳವಳದೊಳಗೆ ತಿರುಗುತ್ತ ಶ್ರೇಷ್ಠ ಕನಿಷ್ಠವೆಂಬ ಮಿಥ್ಯದಲ್ಲಿ ಮಲಿನಗೊಂಡು ಮಡುಗಟ್ಟಿ ನಿಂತ ಸಮಯದೊಳಗೆ ಕಾಣಿಸಿಕೊಂಡ ಬಸವಣ್ಣ ಸರ್ವ ಸಮಾನತೆಯ ಮಾರ್ಮಿಕ ಸೂತ್ರದಲ್ಲಿ ಸಕಲರನ್ನು ಅಳವಡಿಸಿಕೊಂಡು 'ಮಹಾಮನೆ' ಅನುಭವ ಮಂಟಪಗಳ ಮೂಲಕ ಕೂಡಿ ಉಣ್ಣುವ ಮತ್ತು ಒಗ್ಗೂಡಿ ಚಿಂತನ ಮಾಡುವ ವಿನೂತನ ಮಾರ್ಗ ಜಗತ್ತಿಗೆ ಕೊಟ್ಟದ್ದು ಅಸಮಾನ್ಯಗಳಲ್ಲಿ ಮಹತ್ವದ್ದಾಗಿದೆ. ಮಾನವ ಬದುಕಿಗೆ ನಿಶ್ಚಿಂತ ನಿಲುವು ತೋರಿದ ಬಸವಣ್ಣ ಮಾನವಕುಲಕ್ಕೆ ಗೌರವ ಆದರ ತಂದ ಮಾನವತಾ ಮಹಿಮೆದಲ್ಲಿಯೇ ನಿಸ್ಸೀಮರಾಗಿದ್ದಾರೆ.

ಬಸವಣ್ಣನವರು ಕನ್ನಡ ಭಾಷೆಗೆ 'ಕಸುವು' ನೀಡಿದ ಕಲಿಗಳಾಗಿದ್ದಾರೆ. ಜನಸಾಮಾನ್ಯರ ನುಡಿಯೊಳಗೆ ಅಮೃತದ ತೊರೆಯನ್ನು ಹರಿಸಿದ 'ಬಸವಣ್ಣ' ಕನ್ನಡ ನೆಲದೊಳಗಿನ ಮಾತುಗಳ ಮೂಲಕ ಕನ್ನಡ ನಾಡು-ನುಡಿ ಸಂಸ್ಕೃತಿಯ ಸಿರಿತನಕ್ಕೆ ಭದ್ರ ಬುನಾದಿ ಹಾಕಿದ್ದಾರೆ. ಮನುಷ್ಯನ ಬದುಕು ಮಾತು ಮಯ, ಭಾಷಾಮಯವಾಗಿದೆ. ನಮ್ಮ ಆಚಾರ ವಿಚಾರಗಳ ಪ್ರಸ್ತುತಿಗೆ ಬಳಕೆಯಾಗುವ ಭಾಷೆಯು ಬದುಕಿಗೆ ವಿಚಾರಗಳ ನಿಕಟವಾಗುವ ನೆಲೆ ಹೊಂದಿದೆಂಬುದನ್ನು ಸರಳ-ಸಹಜವಾಗಿ ದಿಟ ಮಾಡಿದ ಬಸವಣ್ಣ ಕನ್ನಡ ನೆಲದೊಳಗೆ ಬದುಕು ಕಟ್ಟಿ ತೋರಿಸಿದ ಭಾಷಾ ಸೂತ್ರಕ ರಾಗಿಯೂ ಪ್ರಸಿದ್ಧಿ ಪಡೆದಿದ್ದಾರೆ.

ವೈಚಾರಿಕತೆಗೆ ಹಾದಿ ತೋರಿಸಿದ ಬಸವಣ್ಣ ಡಂಭಾಚಾರಕ್ಕೆ ಬದುಕಿನಲ್ಲಿ ಸ್ಥಾನ ಸಿಗದಂತೆ ಜನ ಸಾಮಾನ್ಯರ ಬದುಕನ್ನು ನಿರೂಪಿಸುವ ಮೂಲಕ ನವ ಸಮಾಜ ನಿರ್ಮಾಣದ ಪ್ರಬಲ ಶಕ್ತಿಯಾಗಿ ಇಂದಿಗೂ ನಿಂತಿರುವುದು ವಿಶೇಷ. ನಿರ್ಭಯದ ನಿರ್ಧಾರಗಳನ್ನು ತೆಗೆದುಕೊಳ್ಳಲು ಶಕ್ತರಾದ ಶರಣರು ಜೀವನ ವಿಮರ್ಶೆಯಲ್ಲಿ ತೊಡಗಿದ್ದು ವೈಜ್ಞಾನಿಕ ಜೀವನವನ್ನು ಬೆರಳು ಮಾಡಿ ತೋರಿಸುವಂತಿದೆ.

'ಬಸವಣ್ಣ ಕಟ್ಟಿದ ಸಮಾಜ್ದಲ್ಲಿ ದಾಹಗಳಿರಲಿಲ್ಲ. ದೌರ್ಜನ್ಯವಿರಲಿಲ್ಲ. ದುಃಖವಿರಲಿಲ್ಲ, ಹಾಳು ಹರಟೆಗಳಿರಲಿಲ್ಲ, ದುಡಿಯದೇ ಉಣ್ಣುವವರಿಲ್ಲ. ಸುಖಿ ಸಮಾಜದ ಎಲ್ಲ ಚಟುವಟಿಕೆಯ ಕೇಂದ್ರವಾಗಿದ್ದ ಬಸವ ಕಲ್ಯಾಣವು ಸ್ವಾವಲಂಬನೆಗೆ ಇನ್ನೊಂದು ಹೆಸರಾಗಿತ್ತು ಮತ್ತು ದಾಸೋಹ ದಾನಗಳ ಮೂಲಸ್ಥಾನದಿಂದ ಆಧ್ಯಾತ್ಮಿಕ ಜೀವಿಗಳನ್ನು ಒಗ್ಗೂಡಿಸುವ ಅಣ್ಣ ಬಸವಣ್ಣನ ಪ್ರಭಾವದ ಬೀಡಾಗಿತ್ತು. ಜೀವನದ ದಿಟ್ಟತನದ ಎಲ್ಲ ಸೂತ್ರಗಳಿಂದ ಸಜ್ಜಾಗಿದ್ದ ಶಿವಶರಣರು ತಮ್ಮ ತಮ್ಮ ಕಾಯಕ ನಿಷ್ಠೆಯಿಂದ ಬದುಕನ್ನು ಕಟ್ಟಿ ತೋರಿಸಿದ ಪ್ರಯೋಗ ಶಾಲೆಯಾಗಿದ್ದ 'ಬಸವ ಕಲ್ಯಾಣ', ಭಕ್ತಿ ಸುಧೆಯಿಂದ ತುಂಬಿ ತುಳುಕಿ ಜೀವನ ಗಂಗೆ ಸಕಲರಿಗೂ ಎಂಬ ವಿಶಾಲತೆಯನ್ನು ವಿಸ್ತಾರಗೊಳಿಸಿದ್ದು ಕನ್ನಡ ನೆಲದ ಗೌರವವೇ ಆಗಿದೆ.

ಬಸವಣ್ಣನವರು ಕನ್ನಡ ನೆಲದೊಳಗೆ ಭಿತ್ತಿರುವ ಸರ್ವ ಸಮನತೆಯ ಸಮಭಾವದ ಬೀಜಗಳು ಮತ್ತೆ ಮತ್ತೆ ಹೊಸ ತನದಿ ಪರಿವರ್ತನೆಗೊಂಡು ಸಮಾಜದಲ್ಲಿ ಏಕೋಭಾವ ತರುತ್ತಿರುವ ಸಂದರ್ಭದಲ್ಲಿ ಸಮಾಜದ ಅವಿಭಾಜ್ಯ ಅಂಗ ವಾಗಿರುವವರು ಅದು-ಇದು ಎಂಬ ಅಪಸ್ವರ ತೆಗೆದು ಬದುಕಿದರೆ ಬಸವಣ್ಣ ನಂಬಿದ ತತ್ವಗಳಿಗೆ ದ್ರೋಹ ಬಗೆದಂತಲ್ಲವೇ?

*

### ಸೋಮೇಶ್ವರ ಶತಕ

*ಉಣದಿರ್ಪಾ ಧನಮಿರ್ದೊಡೇನು ಸುತನಿರ್ದೇಂ ಮುಪ್ಪಿನಲ್ಲಾಗದಾ ।*
*ಒಣಗಲ್ಪೈರಿಗೆ ಬಾರದಿರ್ದ ಮಳೆ ತಾಂ ಬಂದೇನದಾಪತ್ತಿನೊಳ್ ॥*
*ಮಣಿದುಂ ನೋಡದ ಬಂಧುವೇತಕೆಣಿಸಲ್ ಕಾಲೋಚಿತಕ್ಕೆದಿದಾ ।*
*ತೃಣವೇ ಪರ್ವತವಲ್ಲವೇ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥*

ಉಪಯೋಗಿಸದಿರುವ ಹಣವೂ, ಮುಪ್ಪಿನಲ್ಲಿ ಸಲಹದ ಮಗನೂ, ಪೈರು ಒಣಗುತ್ತಿರುವ ಕಾಲದಲ್ಲಿ ಬಾರದಿರುವ ಮಳೆಯೂ, ಕಷ್ಟಕಾಲದಲ್ಲಿ ಬಂದು ವಿಚಾರಿಸಿಕೊಳ್ಳದ ನೆಂಟನೂ ನಿಷ್ಪ್ರಯೋಜನವು, ಸಮಯಕ್ಕೆ ದೊರೆತ ಸಹಾಯವು ಅಲ್ಪವಾದರೂ ಅದೇ ಮಹತ್ತರವಾದದ್ದು.





## ಪ್ರಮಥರೊಳಗೆ ಚನ್ನ ಮಾದಾರ ಚನ್ನಯ್ಯ

-ಯು.ಎನ್. ಸಂಗನಾಳಮಠ, ಉಪನ್ಯಾಸಕರು-ಲೇಖಕರು, 'ಜ್ಯೋತಿರ್ಲಿಂಗ', ಶಿವಮೊಗ್ಗ ರಸ್ತೆ, ಹೊನ್ನಾಳಿ, ದಾವಣಗೆರೆ.

*'ಕೂಪವನಾರನೂ ಕಾಣೆನು ಮಾದಾರ ಚೆನ್ನಯ್ಯನಲ್ಲದೆ*
*ಕೂಪವನಾರನೂ ಕಾಣೆನು ಡೋಹರ ಕಕ್ಕಯ್ಯನಲ್ಲದೆ'*

ಎಂದು ಬಸವಣ್ಣನವರು ಕೂಡಲಸಂಗನ ಹಿತೈಷಿಗಳು ಮಾದಾರ ಚೆನ್ನಯ್ಯ ಡೋಹರ ಕಕ್ಕಯ್ಯ ಎಂದಿದ್ದಾರೆ.

ದಲಿತರ ಪ್ರತಿನಿಧಿ ಮಾದಾರ ಚನ್ನಯ್ಯ ಶಿವಶರಣರಲ್ಲಿ ಪ್ರಮುಖ. ಈತನ ತಂದೆ-ತಾಯಿಗಳ ಬಗ್ಗೆ ಮಾಹಿತಿ ಇಲ್ಲ. ಮೊದಲು ಚರ್ಮ ಹದ ಮಾಡಿ ಜೋಡುಗಳನ್ನು ತಯಾರಿಸುವ ಕಾಯಕವನ್ನು ಕೈಗೊಂಡಿದ್ದನು. ಆದರೆ ಮುಂದೆ ಆಟವಿಗೆ ಹೋಗಿ ಹುಲ್ಲು ಕೊಯ್ದು ಪಟ್ಟಣದಲ್ಲಿ ತಂದು ಹಾಕುವ ಕಾಯಕವನ್ನು ಕೈಗೊಂಡಿದ್ದನು ಎಂದು ತಿಳಿದುಬರುತ್ತದೆ. ಈತನು ಪ್ರಸಿದ್ಧಿಗೆ ಬಂದದ್ದು ತಮಿಳುನಾಡಿನ ಕಂಚಿಗೆ ಬಂದಾಗ ಹೀಗಾಗಿ ಕೆಲವರು ಈತನನ್ನು ಚೋಳದೇಶದವ ಎನ್ನುತ್ತಾರೆ. ಕಂಚಿ ಪಟ್ಟಣದಲ್ಲಿದ್ದಾಗ ಕರಿಕಾಲ ಚೋಳನಲ್ಲಿ ಕುದುರೆಗಳಿಗೆ ಹುಲ್ಲು ಹಾಕುವ ಕಾಯಕ ಮಾಡಿದ ಶಿವನೊಲುಮೆ ಹೊಂದಲು ಕುಲ, ಜಾತಿ, ಕಾಯಕ ಮುಖ್ಯವಲ್ಲ.

ಈತನ ಅಂಕಿತನಾಮ ವಿಚಿತ್ರವಾಗಿದೆ. 'ಕೈಯುಳಿ ಕತ್ತಿ ಅಡಿಗೂಂಟಿಕ್ಕೆಡಯಾಗಬೇಡ ಅರಿನಿಜಾತ್ಮ ರಾಮರಾಮನಾ' ತನ್ನ ಕುಲದ ಕಾಯಕದ ಉಪಕರಣಗಳನ್ನೇ ವಚನಗಳ ಅಂಕಿತವನ್ನಾಗಿರಿಸಿಕೊಂಡಿರುವುದು ವಿಶಿಷ್ಟತೆ. ಈತ ಹತ್ತಕ್ಕಿಂತ ಹೆಚ್ಚು ಬೆಡಗಿನ ವಚನಗಳನ್ನು ರಚಿಸಿದ್ದಾನೆ. ಇವುಗಳಲ್ಲಿ ವರ್ಣಾಶ್ರಮ ಪದ್ಧತಿ, ಜಾತಿ ವ್ಯವಸ್ಥೆಯ ತೀವ್ರ ಖಂಡನೆ ಇದೆ. ತಮಿಳುನಾಡಿನಲ್ಲಿ ಗುರುಕಾರುಣ್ಯ ಹೊಂದಿ ಇಷ್ಟಲಿಂಗ ಧಾರಿಯಾಗಿ ಕನ್ನಡದಲ್ಲಿ ವಚನಗಳನ್ನು ರಚಿಸಿದನು.

ಮಹಾಕವಿ ಹರಿಹರ 'ಮಾದಾರ ಚೆನ್ನಯ್ಯನ ರಗಳೆ' ಎಂಬ ಕಾವ್ಯ ರಚಿಸಿದ್ದಾನೆ. ಇದು ದಲಿತರಿಗೆ ಆತ್ಮವಿಶ್ವಾಸ ಹುಟ್ಟಿಸಿದ ಕಾವ್ಯ. ಮಾದಿಗನಾದ ಚನ್ನಯ್ಯನ ಮನೆಯಲ್ಲಿ ಅವನ ಎಂಜಲನ್ನೂ ಶಿವ ಉಂಡುದರಿಂದ ಆಗಮಗಳು ನಡುಗಿ ಹೋದವು ಎಂಬ ಕಥೆ ಬರುತ್ತದೆ. ಬಸವಣ್ಣನವರು ಈ ರೀತಿ ಹೇಳಿದ್ದಾರೆ.

*'ವೇದ ನಡ ನಡುಗಿತ್ತು, ಶಾಸ್ತ್ರ ವಗಲಿ ಕೆಲಕ್ಕೆ ಸಾರಿದ್ದಿತ್ತಯ್ಯಾ!*
*ತರ್ಕ ತರ್ಕಸಲರಿಯದೆ ಮೂಗುವಟ್ಟಿದ್ದಿತ್ತಯ್ಯಾ!*
*ಆಗಮ ಹೆರ ತೊಲಗಿ ಆಗಲಿದ್ದಿತ್ತಯ್ಯಾ*
*ನಮ್ಮ ಕೂಡಲಸಂಗಯ್ಯನು ಚನ್ನಯ್ಯನ ಮನೆಯಲುಂಡ ಕಾರಣ'*

*'ನಡೆ ಚೆನ್ನ ನುಡಿ ಚೆನ್ನ ಎಲ್ಲಿ ನೋಡಿದಡಲ್ಲಿ ಚನ್ನ*
*ಪ್ರಮಥರೊಳಗೆ ಚೆನ್ನ ಪುರಾತರೊಳಗೆ ಚೆನ್ನ*
*ಸವಿ ನೋಡಿ ಅಂಬಲಿ ರುಚಿಯಾಯಿತ್ತೆಂದು*
*ಕೂಡಲಸಂಗಮದೇವಂಗೆ ಬೇಕೆಂದು ಕೈದೆಗೆದ ನಮ್ಮ ಚನ್ನ'*

ತನ್ನ ಪುಣ್ಯಾಂಗನೆಯು ನೀಡಿದ ಅಂಬಲಿಯನ್ನು ಚನ್ನಯ್ಯ ಲಿಂಗಾರ್ಪಿತ ಮಾಡಿ ಸೇವಿಸುತ್ತಿದ್ದನು. ಆ ಅಂಬಲಿಯ ರುಚಿಗೆ ಶಿವನ ಬಾಯಲ್ಲಿ ನಿರೂರುತ್ತಿತ್ತು. ಒಮ್ಮೆ ಶಿವನು ಚನ್ನಯ್ಯನೊಡನೆ ಆ ಅಂಬಲಿಯನ್ನು ಸವಿದು ಸಂತೃಪ್ತನಾದನು. ಇತ್ತ ಕರಿಕಾಲ ಚೋಳನು ಅರ್ಪಿಸಿದ ದಿವ್ಯಾನ್ನ, ಅಮೃತಾನ್ನಗಳನ್ನು ಸವಿಯದೇ 'ಚೆನ್ನನ ಮನೆಯ ಅಂಬಲಿಯಿಂದ ನನಗೆ ಹಸಿವು ಹಿಂಗಿದೆ' ಎಂದನು. ಆಗ ಚೋಳರಾಯನು ಚನ್ನಯ್ಯನ ಮನೆಗೆ ಬಂದು ಆತನ ಪಾದಗಳನ್ನು ತನ್ನ ಮುಕುಟದಿಂದ ಅಲಂಕರಿಸಿದನು. 'ದೊರೆಯ ನೀನು ಕುಲಜ ನಾನು ಅಂತ್ಯಜ ನನ್ನ ಕಾಲನ್ನು ಹಿಡಿಯಲಾಗದು ಬಿಡು' ಎಂದನು ಚನ್ನಯ್ಯ 'ಏನೇ ಆದರೂ ನಿನ್ನ ಪಾದವ ಬಿಡೆನು' ಎಂದ ರಾಜ. ಚನ್ನಯ್ಯನನ್ನು ಆನೆಯ ಮೇಲೆ ಕುಳ್ಳಿರಿಸಿ ನಗರದಲ್ಲಿಯ ಶಿವಾಲಯಕ್ಕೆ ಕರೆತಂದನು. ಶಿವನು ಪ್ರತ್ಯಕ್ಷನಾಗಿ ಆಲಂಗಿಸಿದನು. ಹೀಗೆ ಮಾದಾರ ಚೆನ್ನಯ್ಯ ಅಂದು ಚೋಳರಾಜನ ಸೆರೆಯಲ್ಲಿ ವೇದವಿಪ್ರರ ಹಿಡಿತದಲ್ಲಿ ಸಿಕ್ಕಿ ಬಿದ್ದಿದ್ದ ದೇವರನ್ನು ಏಕಕಾಲದಲ್ಲಿ ಸೆರೆ ಬಿಡಿಸಿದ.

ಸಮಾಜಕ್ಕೆ ಶಾಪವಾಗಿ ಅಂಟಿದ ಕುಲ, ಜಾತಿ, ಹೊಲೆ ಸಮಸ್ಯೆಗಳನ್ನು ಕುರಿತು ಈತನು ತೀವ್ರ ಚಿಂತನೆ ನಡೆಸಿ ಅವುಗಳಿಗೆ ಹೊಸ ವ್ಯಾಖ್ಯಾನ ನೀಡಿದ್ದಾನೆ. ಚೆನ್ನಯ್ಯನು ಉಚ್ಚತರದ ಶಿವಾನುಭವಿ.

*

# ಬಳಕೆಯಾಗದ ಹಣ ಅನಾಗರಿಕತೆಯ ಲಕ್ಷಣ

–ಡಾ॥ ರಾಜಶೇಖರ ಜಮದಂಡಿ, ಜೆ.ಎಸ್.ಎಸ್.ಮಹಿಳಾ ಕಾಲೇಜು, ಸ್ನಾತಕೋತ್ತರ ವಿಭಾಗ, ಚಾಮರಾಜನಗರ–೫೭೧೩೧೩.

ಪ್ರತಿಯೊಬ್ಬರೂ ತಾವು ಯಾವುದೇ ಕೆಲಸ ಮಾಡಿದರೂ ಅದರ ಪ್ರತಿಫಲ ಹಾಗೂ ಗುರಿಯೆಲ್ಲಾ ಹಣ ಸಂಪಾದನೆಯ ಕಡೆಗೆ ಇರುತ್ತದೆ, ಹಾಗಾಗಿ ಸಮಾಜದಲ್ಲಿ ದುಡ್ಡಿದ್ದವನೇ ದೊಡ್ಡಪ್ಪ, ಹಣವೆಂದರೆ ಹೆಣವೂ ಬಾಯಿ ಬಿಡುವುದು, ಹಣವಿಲ್ಲದವನು ಹೆಣಕ್ಕಿಂತ ಕಡೆ ಎಂಬ ಮಾತುಗಳನ್ನು ಕೇಳುತ್ತಿರುತ್ತವೆ. ಆದರೆ ಹಣವೊಂದೇ ಜೀವನದಲ್ಲಿ ಸುಖ–ಶಾಂತಿಗಳನ್ನು ನೀಡುವುದಿಲ್ಲ. ಅದರಾಚೆ ಬೇರೆ ರೀತಿಯಾದ ಸುಖ–ನೆಮ್ಮದಿಗಳಿಗೆ ಬೇರೆ ಬೇರೆ ಮಾರ್ಗಗಳಿವೆ ಅವುಗಳನ್ನು ಸೂಕ್ಷ್ಮವಾಗಿ ಕಂಡಿಕೊಳ್ಳಬೇಕಾಗಿದೆ.

ಹಣಕ್ಕೆ ಮೂರೇ ದಾರಿಗಳು; ದಾನ, ಭೋಗ ಮತ್ತು ನಾಶ. ಬೇರೆಯವರಿಗೆ ದಾನ ಮಾಡದಿದ್ದ ಹಣ, ತಾನು ಅನುಭವಿಸದಿದ್ದ ಹಣ ಕೊನೆಗೆ ನಾಶವಾಗುವುದು ಅಥವಾ ಪರರ ಪಾಲಾಗುವುದು ಖಂಡಿತ. ಕಾಲನ ಕರೆಗೆ ಓಗೊಟ್ಟ ಮೇಲೆ ಆ ಹಣವನ್ನು ಪೋಲು ಮಾಡುವ ಮಕ್ಕಳು, ನುಂಗಿ ಹಾಕುವ ದಾಯಾದಿಗಳು, ವಶಪಡಿಸಿಕೊಳ್ಳುವ ಅಧಿಕಾರಿಗಳು, ಕನ್ನ ಹಾಕು ಕದ್ದೊಯ್ಯುವ ಕಳ್ಳರು ಹೀಗೆ ಸಾಲುಸಾಲಾಗಿ ನಿಂತಿರುತ್ತಾರೆ.

ಕೇವಲ ಹಣವನ್ನು ಗಳಿಸುವುದರಲ್ಲೇ ಬಾಳನ್ನೆಲ್ಲಾ ಕಳೆದರೆ ಹಣದ ಪ್ರಯೋಜನ ಪಡೆದುಕೊಳ್ಳುವುದು ಯಾವಾಗ? ಹಣವನ್ನು ಖರ್ಚು ಮಾಡಬಾರದೆಂದು ಜೋಪಾನವಾಗಿ ಕೂಡಿಟ್ಟರೂ ಅದರ ಪ್ರಯೋಜನ ದಕ್ಕಿಸಿಕೊಳ್ಳುವುದು ಯಾವಾಗ? ಮೊದಲಿಗೆ ಹಣವಿಲ್ಲದೆ ಬಡತನ; ನಂತರ ಹಣವಿದ್ದರೂ ಬಡತನ. 'ತಾನೂ ತಿನ್ನ ಪರರಿಗೂ ಕೊಡ' ಎನ್ನುವಂತೆ ತನ್ನ ಬಳಿ ಸಂಗ್ರಹವಾಗಿರುವ ಹಣ ಯಾವ ಕಾರಣಕ್ಕೂ ಕಡಿಮೆಯಾಗಬಾರದೆಂಬ ಗುಣ ಜಿಪುಣನಿಗಿರುತ್ತದೆ. ಹಣ ನೋಡಿದಾಗ ಎಷ್ಟು ಸಂತೋಷವಾಗುತ್ತದೆಯೋ ಅದರ ಸಂಪಾದನೆ ಮಾಡುತ್ತಾ ಹೋದಂತೆ ಅದರ ಎರಡರಷ್ಟು ದುಃಖದಿಂದ ನರಳಿ ನೆಲ ಹಿಡಿಯುವುದೂ ಖಚಿತ.

ಉದಾಹರಣೆಗೆ ಒಂದು ಸಣ್ಣ ಕಥೆಯ ಮೂಲಕ ತಿಳಿಯಬಹುದು. ಅರಮನೆಯಲ್ಲಿ ಕೆಲಸ ಮಾಡಿಕೊಂಡು ಮಹಾರಾಜರು ಕೊಡುತ್ತಿದ್ದ ಸಂಬಳದಿಂದ ತೃಪ್ತಿಯಾಗಿದ್ದ ಒಬ್ಬ ನೌಕರನಿಗೆ ಒಮ್ಮೆ ಇದ್ದಕ್ಕಿದ್ದಂತೆ ಅರ್ಧ ಕೊಪ್ಪರಿಗೆಯಷ್ಟು ಹಣ ಸಿಕ್ಕಿತಂತೆ. ಅದನ್ನು ಕಂಡು ಸಂತೋಷಿಸಿದ ಆ ನೌಕರ ಇನ್ನಷ್ಟು ಯೋಚನೆ ಮಾಡತೊಡಗಿದ, ದಿನಗಳೆದಂತೆಯೇ ಊಟ ನಿದ್ದೆಯನ್ನು ಮರೆತು ಸಣ್ಣಗಾಗತೊಡಗಿದ. ಇದನ್ನು ಗಮನಿಸಿದ ಮಹಾರಾಜರು ಅವನನ್ನು ಕರೆದು ವಿಚಾರಿಸಿದಾಗ ಆ ನೌಕರನೆಂದ 'ಮಹಾರಾಜರೇ ನೀವು ಕೊಡುತ್ತಿದ್ದ ಸಂಬಳದಿಂದ ಮೊದಲಿಗೆ ತೃಪ್ತಿಯಾಗಿದ್ದೆ ಆದರೆ ಈಚೆಗೆ ಅರ್ಧ ಕೊಪ್ಪರಿಗೆಯಷ್ಟು ಹಣ ದೊರೆತ ಮೇಲೆ ಆ ಅರ್ಧವಾಗಿರುವುದನ್ನು ಪೂರ್ಣ ತುಂಬಿಸಲುವಾಗಿ ನೀವು ಕೊಡುವ ಸಂಬಳವನ್ನೆಲ್ಲಾ ಅದಕ್ಕೆ ಸುರಿಯುತ್ತಿದ್ದೇನೆ. ಅದು ತುಂಬಿದ ನಂತರ ಸುಖವಾಗಿರಬೇಕೆಂದು ಕೊಂಡಿದ್ದೇನೆ' ಎಂದು ಹೇಳಿದ. ಈ ಮಾತನ್ನು ಕೇಳಿದ ಮಹಾರಾಜರು 'ಅಯ್ಯೋ ಹುಚ್ಚಪ್ಪ ಅದನ್ನು ಪೂರ್ಣ ತುಂಬಿಸುವುದರೊಳಗೆ ನಿನ್ನ ಆಯುಷ್ಯ ಮುಗಿದೀತು. ಈಗ ದೊರೆತ ಹಣದಿಂದಲಾದರೂ ಸುಖವಾಗಿ ತಿಂದುಂಡು ಇರಲು ಕಲಿ. ವೃಥಾ ಆಗಲಾರದ ಕೆಲಸಕ್ಕೆ ಕೈ ಹಾಕಿ ನಿನ್ನ ಜೀವನ ಬರಡಾಗಿಸಿಕೊಳ್ಳಬೇಡ' ಎಂದು ಬುದ್ಧಿವಾದ ಹೇಳಿದರು.

ಹೀಗೆ ಹಣವು ಸಕಾಲದಲ್ಲಿ ಸರಿಯಾಗಿ ಬಳಸದಿದ್ದರೆ ಹೇಗೆ? 'ಸಿರಿ ಬಂದ ಕಾಲಕ್ಕೆ ಕರೆದು ದಾನವ ಮಾಡು ಪರಿಣಾಮವಕ್ಕು ಪದವಕ್ಕು ಕೈಲಾಸ ನೆರೆಮನೆಯಕ್ಕು ಸರ್ವಜ್ಞ! ಹಣವಿದ್ದಾಗ ದಾನ–ಧರ್ಮಗಳನ್ನು ಮಾಡಬೇಕು. ಕೊಟ್ಟಿದ್ದು ತನಗೆ ಬಚ್ಚಿಟ್ಟಿದ್ದು ಪರರಿಗೆ ಕೊಟ್ಟಿದ್ದು ಕೆಟ್ಟಿತೆನಬೇಡ ಮುಂದೆ ಕಟ್ಟಿಹುದು ಬುತ್ತಿ ಸರ್ವಜ್ಞ. ಇರುವ ಹಣವನ್ನು ಚಲಾವಣೆಯಲ್ಲಿದ್ದರೆ ಯಾವುದೋ ರೂಪದಲ್ಲಿ ಮತ್ತೆ ಬರುತ್ತದೆಂದು ಸರ್ವಜ್ಞ ಹೇಳಿದ್ದಾನೆ. ಹಣವಿದ್ದ ಕಾಲಕ್ಕೆ ಅಥವಾ ಬಂದ ಕಾಲಕ್ಕೆ ಅನುಭೋಗಿಸುವುದು ಒಂದನೇ ದಾರಿ. ಅನುಭವಿಸುವುದರೊಂದಿಗೆ ಇತರರನ್ನು ಸಂತೋಷಗೊಳಿಸುವುದು ಎರಡನೇ ದಾರಿ.

ಮನುಷ್ಯನ ಕಿವಿಗೆ ನಾಣ್ಯದ ಶಬ್ದ ಕೇಳಿದರೆ ಸಾಕು ತಕ್ಷಣ ಅತ್ತ ನೋಡುತ್ತಾನೆ. ಇದು ಅತಿಯಾದ ಹಣದ





ವ್ಯಾಮೋಹವನ್ನು ಸೂಚಿಸುತ್ತದೆ. ಈ ಹಣದ ವ್ಯಾಮೋಹವನ್ನು ಮೀರಿ ಜಗತ್ತಿನಲ್ಲಿ ನಿಲ್ಲಬಲ್ಲವರು ಯಾರಿದ್ದಾರೆ? ಲೌಕಿಕ ಮನುಷ್ಯನಿಗಂತೂ ಅಸಾಧ್ಯ. ಇನ್ನು ಅಲೌಕಿಕ ಚಿಂತನೆಗೈಯ್ಯುವ ಸಾಧು–ಸಂತರು, ಯೋಗಿಗಳಿಗಂತೂ ಕಷ್ಟಸಾಧ್ಯವೆಂದೇ ಹೇಳಬಹುದು. ಬದುಕನ್ನು ಒಂದು ಹಂತದಲ್ಲಿ ಹಣದಿಂದ ಹಗುರಗೊಳಿಸಿಕೊಳ್ಳಬಹುದೇ ಹೊರತು ಅದೇ ಶಾಶ್ವತ ಸುಖ ನೀಡುತ್ತದೆಂದುಕೊಳ್ಳುವುದು ಮೂರ್ಖತನ. ಈ ಹಣದ ವ್ಯಾಮೋಹವೆನ್ನುವುದು ಸದ್ಗುಣವೆ? ದುರ್ಗುಣವೆ? ಎಂದರೆ ತಟ್ಟನೆ ದುರ್ಗುಣವೆಂದೇ ಹೇಳಬೇಕು. ಯಾಕೆಂದರೆ ಅತಿಯಾದ ಹಂಬಲವಿರುವುದು ನಿಜಕ್ಕೂ ಅದರಿಂದಲೇ ಅಪಾಯಕಾರಿ. ಉದಾಹರಣೆಗೆ, ಧರ್ಮರಾಯನ ಮಹಾಸಂಪತ್ತಿನ ದುರಾಸೆಗೊಳಗಾಗಿ ಅದನ್ನು ಪಡೆದುಕೊಳ್ಳುವ ನೆಪದಲ್ಲಿ ಲೆಕ್ಕದಾಟಕ್ಕೆ ಮರುಳಾಗಿ ಕೊನೆಗೆ ದುರ್ಯೋಧನ ತನ್ನವರೆಂಬುವವರನ್ನೆಲ್ಲಾ ಕಳೆದುಕೊಂಡ ಘೋರವಾದ ಪ್ರಸಂಗದ ತಿಳುವಳಿಕೆಯ ಪಾಠ ಮಹಾಭಾರತದಿಂದ ಕಂಡು ಬರುತ್ತದೆ.

ಮುಖ್ಯವಾಗಿ ಅತಿಯಾದ ಹಣದ ಚಂಚಲತೆಗೊಳಗಾಗದವರೊಂದಿಗೆ ಸಮಾಜದಲ್ಲಿ ಕಂಡುಬರುವ ಸಾಹಿತ್ತಿಕ, ಸಾಂಸ್ಕೃತಿಕ, ಆಧ್ಯಾತ್ಮಿಕ, ಅನಾಥಾಶ್ರಮ ಸಂಘ–ಸಂಸ್ಥೆಗಳ ಒಡನಾಟ, ಪಾಲ್ಗೊಳ್ಳುವಿಕೆ ಹಾಗೂ ದಾನ–ಧರ್ಮಾದಿಗಳನ್ನು ಮಾಡಿ ಹಣದ ಸದುಪಯೋಗವಾದಾಗ ಸಮಾಜಕ್ಕೆ ಸ್ಪಂದಿಸಿದಂತಾಗುತ್ತದೆ.

ಹಾಗಾಗಿ ಹಣವನ್ನು ಸಂಗ್ರಹಿಸುವುದರ ಮೂಲಕ ಉಪಯುಕ್ತತೆತ ಕಡೆಗೆ ಗಮನ ಹರಿಸೋಣ. ಅದರಿಂದಾಗುವ ಸುಖವನ್ನು ಪಡೆದು ಜೀವನ ಪಾವನವಾಗಿಸಿಕೊಳ್ಳೋಣ.

✲

## ಶ್ರೀವಾಣಿ

ದುಡಿಮೆ ಮಾಡುವಂತಹ ಪ್ರವೃತ್ತಿ ಬಹಳ ಮಟ್ಟಿಗೆ ದೂರವಾಗಿ ಬಿಟ್ಟಿದೆ. ಫಲಿತಾಂಶ ; ಉತ್ಪಾದನೆ ಕಡಿಮೆಯಾಗಿ ಬಡತನ ಜಾಸ್ತಿಯಾಗುತ್ತಿದೆ. ದುಡಿಮೆ ಎನ್ನುವುದು ಎಲ್ಲಾ ಕ್ಷೇತ್ರಕ್ಕೂ ಅನ್ವಯವಾಗುವಂತಹ ಮಾತು. ರೈತನಾಗಲೀ, ಕಾರ್ಮಿಕನಾಗಲಿ ಅಧಿಕಾರಿಯಾಗಲೀ, ಮುಖಂಡನಾಗಲೀ, ದುಡಿಮೆ ಮಾಡಿಯೇ ತೀರಬೇಕು.

## ತಿರುಕ್ಕುರುಳ್

ಕನ್ನಡ ಅನುವಾದ : ನ. ಮುನಿಸ್ವಾಮಿ

ಅಧ್ಯಾಯ –೬

### ಜೀವನ ಸಂಗಾತಿಯ ಲಕ್ಷಣ

ಮನೆಗೆ ತಕ್ಕ ಸುಗುಣೆಯಾಗಿ ಗಂಡನ ಗಳಿಕೆಗೆ
ತಕ್ಕಂತೆ ಬಾಳುವವಳೇ ಜೀವನ ಸಂಗಾತಿ

ಗೃಹ ಜೀವನಕೆ ತಕ್ಕಗುಣ ಮಡದಿಯಲಿಲ್ಲದಿರೆ
ಅದು ಸಿರಿತನದ ಬಾಳಾದರೂ ವ್ಯರ್ಥ.

ಬಡತನವೇನುಂಟು ಮಡದಿ ಸುಗುಣೆಯಾಗಿರಲು ?
ಸಿರಿತನವೇನುಂಟು ಮಡದಿ ಸುಗುಣೆಯಾಗದಿರಲು ?

ಹೆಣ್ಣಿಗಿಂತ ಹಿರಿಯ ಸಿರಿ ಯಾವುದಿಹುದು
ಅವಳು ಶೀಲವೆಂಬ ಸ್ಥಿರತೆ ಪಡೆದಿರಲು ?

ದೈವಕೆ ಮಣಿಯದೆ ಪತಿಯ ಮಣಿಯುವವಳು,
ಸಕಾಲಕ್ಕೆ ಹುಯ್ವ ಮಳೆಯಂಥವಳು.

ತನ್ನ ಶೀಲವ ರಕ್ಷಿಸಿ, ಪತಿಯ ಪಾಲಿಸಿ ಹಿರಿದೆನಿಸುವ
ಕೀರ್ತಿಯ ಗಳಿಸಬಲ್ಲವಳ್ಳೇ ಸತಿ.

ಸತಿಯರನು ಸೆರೆಯಿರಿಸಿ ರಕ್ಷಿಸುವುದರಲೇನಿಹುದು?
ಅವರು ತಮ್ಮ ಶೀಲವ ತಾವು ರಕ್ಷಿಸುವುದೇ ಶ್ರೇಷ್ಠ.

ಪತಿಯನು ಸೇವಿಪ ಸೌಭಾಗ್ಯವನು ಪಡೆದ ಸತಿಯು,
ಸುರರಿರುವ ಲೋಕದಲಿ ಶ್ರೇಯವನು ಪಡೆವಳು.

ಕೀರ್ತಿಯನು ರಕ್ಷಿಸದ ಸತಿಯನು ಪಡೆದ ಪತಿಯು,
ಸಿಂಹದಂತೆ ನಡೆಯನು ಹಗೆಗಳ ಮುಂದೆ.

ಮನೆಗೆ ಮಂಗಳ ಮಡದಿಯ ಸದ್ಗುಣವು ;
ನಲ್ಮಕ್ಕಳ ಭಾಗ್ಯ ಮತ್ತದಕೆ ಭೂಷಣವು.

# ಮಹಾದೇವಿಯಕ್ಕನ ಒಂದು ವಚನದ ವಿಶ್ಲೇಷಣೆ

–ಬಿ. ಮಹದೇವಪ್ಪ, ಸಂಪಾದಕರು, 'ಅರಿವು ಆಚಾರ' ನಂ.9, ಇಂಡಸ್ಟ್ರಿಯಲ್ ಎಸ್ಟೇಟ್, ಗುಲ್ಬರ್ಗಾ.

*ಮರ ಮರ ಮಥನಿಸಿ ಕಿಚ್ಚು ಹುಟ್ಟಿ*
*ಸುತ್ತಣ ತರುಮರಾದಿಗಳ ಸುಡಲಾಯಿತ್ತು*
*ಆತ್ಮವಾತ್ಮ ಮಥನಿಸಿ ಅನುಭಾವ ಹುಟ್ಟಿ*
*ತನುಗುಣಾದಿಗಳ ಸುಡಲಾಯಿತ್ತು*
*ಇದು ಕಾರಣ, ನಿಮ್ಮ ಮಹಾನುಭಾವಿಗಳ ಅನುಭಾವವ*
*ತೋರಿ*
*ಎನ್ನೊಡಲನು ಉಳುಹಿಕೊಳ್ಳಾ ಚೆನ್ನಮಲ್ಲಿಕಾರ್ಜುನಯ್ಯ!*
–ಮಹಾದೇವಿಯಕ್ಕನವರು

ಕಲ್ಯಾಣದ ಶಿವಶರಣರು ಅನುಭವ ಗೋಷ್ಠಿಗಳಿಗೆ ಅತ್ಯಂತ ಪ್ರಾಮುಖ್ಯತೆಯನ್ನು ಕೊಟ್ಟಿದ್ದರು. ಅಂದು ಸ್ಥಾಪಿಸಿದ್ದ ಕಲ್ಯಾಣದ ಅನುಭವಮಂಟಪ ಭಾರತದಲ್ಲಿಯೆ ಪ್ರಪ್ರಥಮ ವಾದ ಚರ್ಚಾವೇದಿಕೆಧಾರ್ಮಿಕ ಸಂಸತ್ತು ಎಂದು ಕರೆಸಿ ಕೊಂಡಿದೆ. ಪುರಾಣ ಕಾಲದಲ್ಲಿ ಮಿಥಿಲೆಯ ಜನಕ ಮಹಾರಾಜನ ಆಸ್ಥಾನ, ಧರ್ಮ ಜಿಜ್ಞಾಸುಗಳ ಕೂಟವಾಯಿತ್ತು ಎಂಬ ಪ್ರಸ್ತಾಪ ಬರುವುದಾದರೂ ಅದರಲ್ಲಿ ಯಾರು ಯಾರು ಭಾಗವಹಿಸುತ್ತಿದ್ದರು ಎಂಬ ಉಲ್ಲೇಖ ದೊರೆಯುವುದಿಲ್ಲ. ಗ್ರೀಕ್ ತತ್ವಜ್ಞಾನಿಗಳು ಅಥೆನ್ಸ್‌ನಲ್ಲಿ ಪ್ಲೇಟೋನ ಅಧ್ಯಕ್ಷತೆಯಲ್ಲಿ ಸಂಭಾಷಣೆ ನಡೆಸುತ್ತಿದ್ದರು ಎಂಬ ಉಲ್ಲೇಖಗಳು ದೊರೆ ಯುವುದರಿಂದ ಕಲ್ಯಾಣದ ಅನುಭವ ಮಂಟಪ ಜಗತ್ತಿ ನಲ್ಲಿಯೇ ಎರಡನೆಯದೆಂಬ ಅಗ್ಗಳಿಕೆಗೆ ಪಾತ್ರವಾಗುತ್ತದೆ. ಅಥೆನ್ಸ್‌ನ ಸಂವಾದ ಗೋಷ್ಠಿಗೆ ಏನೆಂದು ಕರೆಯುತ್ತಿದ್ದರು ಎಂಬ ಸ್ಪಷ್ಟ ಉಲ್ಲೇಖ ಗ್ರೀಕ್ ಇತಿಹಾಸದಲ್ಲಿ ದೊರೆಯುವುದಿಲ್ಲ. ಕಲ್ಯಾಣದ ಅನುಭವ ಮಂಟಪದ ಜಾತ್ಯಾತೀತತೆ, ಪ್ರಾಂತಾತೀತತೆ, ಲಿಂಗಾತೀತತೆ, ವಯಾ ತೀತತೆಯ ಸ್ವರೂಪ ಅಥೇನ್ಸ್‌ನ ಚರ್ಚಾಕೂಟಕ್ಕೆ ಇದೆಯೋ ಇಲ್ಲವೋ ತಿಳಿದವರೇ ಹೇಳಬೇಕು.

ಅನುಭಾವವೆಂಬುದು ಬರಿಯ ಚರ್ಚೆಯಲ್ಲ ಅಥವಾ ಬರಿಯ ಸಂಭಾಷಣೆಯಲ್ಲ. ಅರಿವಿನ ತೃಪ್ತಿಗೆ ಅನುಭಾವವೇ ಆಶ್ರಯ ಎಂಬ ಬಳಿಕ ಅನುಭಾವದ ಬಳಿಕೆ ಮುಂದೆ ಶಬ್ಧವಿಲ್ಲ; ಗೆಯೆಯಿಲ್ಲ. ಅನುಭಾವವೆಂಬುದು ಅದು ಆತ್ಮ ವಿದ್ಯೆ. ಅನುಭಾವವೆಂಬುದು ತನ್ನ ತಾನರಿಯುವದು. ತನ್ನ ತಾ ತಿಳಿದ ಮೇಲೆ ಇನ್ನೇನಿನ್ನೇನೋ! ಎಂಬ ಕಡಕೋಳ ಮಡಿವಾಳಪ್ಪನವರ ಅ ಮಾತಿನಂತೆ ನಮ್ಮ ವಿದ್ಯಾ, ಬುದ್ಧಿ, ಜ್ಞಾನ, ಮಹಾಜ್ಞಾನಗಳ ಅಂತಿಮ ಧ್ಯೇಯ ತನ್ನ ಯಾ ತಿಳಿಯುವುದೇ ಆಗಿದೆ. ತನ್ನ ತಾ ತಿಳಿದರೆ ತನುವಿನ ಅವಗುಣಗಳು ತಾನಾಗಿ ಸುಟ್ಟು ಹೋಗುತ್ತವೆ. ಆತ್ಮ ನಿರೀಕ್ಷೆ ಅಪ್ಪಟ ಪರೀಕ್ಷೆ.

ಮೇಲಿನ ವಚನದಲ್ಲಿ ಶಿವಶರಣೆ ಮಹಾದೇವಿಯಕ್ಕ ನವರು ಅನುಭಾವದಿಂದ ಎಂತಹ ಲಾಭವಾಗುತ್ತದೆ ಯೆಂಬುದನ್ನು ಸರಿಯಾದ ನಿದರ್ಶನ ಕೊಟ್ಟು ವಿವರಿಸಿ ದ್ದಾರೆ. ದಟ್ಟಮರಗಳ ಕಾಡಿನಲ್ಲಿ ಮರಗಳು ಗಾಳಿ ಯಿಂದ ಒಂದಕ್ಕೊಂದು ತಿಕ್ಕಿದಾಗ ಬೆಂಕಿ ತಲೆದೋರಿ ಅದರಲ್ಲಿ ಬೇವು–ಮಾವು ಬೊಬ್ಬಲಿ–ಶ್ರೀಗಂಧ, ಆಲ–ಹುಣಸೆ ಮೊದಲಾದವೆಲ್ಲ ಸುಟ್ಟು ಬೂದಿಯಾಗುತ್ತವೆ. ಕೇವಲ ತಿಕ್ಕಾಟಕ್ಕೆ ಗುರಿಯಾದ ಮರಗಳು ಮಾತ್ರ ಸುಡುತ್ತವೆ ಯೆಂಬುದಲ್ಲ, ಅಕ್ಕ–ಪಕ್ಕದ ಮರಗಳೂ ಆ ದಾವಾನಲಕ್ಕೆ ಬರಿಯಾಗುತ್ತವೆ. ಆ ಒಂದು ಅಗ್ನಿಯಲ್ಲಿ ಒಳ್ಳೆಯ ಗುಣದ ಮರಗಳೂ, ಕೆಟ್ಟಗುಣದ ಜಾಲಿ–ಈಚಲ ದಂಥ ಮರಗಳೂ ಸುಟ್ಟು ಸಾಮಾನ್ಯಗುಣವಾದ ಬೂದಿ ಸ್ವರೂಪಕೆ ಬಂದಿರುತ್ತವೆ. ಅಗ್ನಿಯಲ್ಲಿ ದಹನದ ಬಳಿಕ ಮರಗಳು ಪೂರ್ವಗುಣಗಳು ಅಳಿಯುವಂತೆ ಜ್ಞಾನಾಗ್ನಿ ಯಿಂದ ಮನುಷ್ಯನ ಪೂರ್ವಗುಣಧರ್ಮಗಳು ಸುಟ್ಟು ಕರಕಲಾಗುತ್ತದೆ.

ಅದೇ ರೀತಿಯಲ್ಲಿ ಅನುಭವ ಮಂಟಪದಲ್ಲಿ ಭಾಗ ವಹಿಸಿದಾಗ ಪ್ರಾಜ್ಞರೆಂಬ ಮಹಾಮರಗಳ ವೈಚಾರಿಕ ಮಂಥನದಲ್ಲಿ ಅಗ್ನಿ ಸ್ವರೂಪದ ಮಹಾಜ್ಞಾನ ಉದಿಸಿ ಸುತ್ತಲುತ್ತಲೂ ಅನುಭಾವದ ಶಾಖ ಆವರಿಸಿ, ಅದರಲ್ಲಿ ಭಾಗವಹಿಸಿದವರ ತನುಗುಣಗಳಾದ ಈರ್ಷೆ, ಮತ್ಸರ, ಗರ್ವ, ಅಹಂಕಾರ, ಮೋಸ, ವಂಚನೆ ಮೊದಲಾದವೆಲ್ಲ ಸುಟ್ಟು ಕರಕಾಗುತ್ತವೆ. ಇಲ್ಲಿ ಚರ್ಚೆ ಮಾಡುವವರ ಮನಸ್ಸು ಗಳಷ್ಟೇ ತಿಳಿಯಾಗುವುದಿಲ್ಲ, ಆಲಿಸಿ ಅನುಭವಿಸಿದವರು ಕೂಡ ಅನುಭಾವದ ಪೀಯೂಕ್ಷ ಸೇವಿಸಿ ತಮ್ಮ ಅವಗುಣ ವನ್ನೆಲ್ಲ ಶಿವಗುಣವನ್ನಾಗಿ ಮಾಡಿಕೊಳ್ಳುತ್ತಾರೆ.

ಈ ಒಂದು ಕಾರಣದಿಂದಲೇ ಮಹಾದೇವಿಯಕ್ಕ ನವರು ತನ್ನ ಆರಾಧ್ಯದೈವ ಚೆನ್ನಮಲ್ಲಿಕಾರ್ಜುನನಿಗೆ ಬೇಡಿ ಕೊಳ್ಳುವುದೇನೆಂದರೆ ನಿಮ್ಮ ಶರಣರ ಅನುಭಾವವನ್ನು ಕರುಣಿಸಿ ತನ್ನ ದೇಹವನ್ನು ಉಳಿಸಿಕೊಡು ಎಂದು. ಈ ಒಂದು ಅನುಭಾವ ಪ್ರಾಪ್ತಿಗೋಸುಗವೇ ಅವರು ದೂರದ ಉಡುತಡಿಯಿಂದ ಕಲ್ಯಾಣವನ್ನು ಹುಡುಕಿಕೊಂಡು ಬಂದರು. 'ನಿಮ್ಮ ಶರಣರ ಸೂಳ್ನುಡಿಯ ಒಂದರಗಳಿಗೆಯಿತ್ತಡೆ ನಿಮ್ಮನ್ನಿತ್ತೆ ಕಾಣಾ ರಾಮನಾಥಾ' ಎಂದು ದೇವರ ದಾಸಿಮಯ್ಯನವರು ಹೇಳಿದರು. 'ಜ್ಞಾನದ ಬಲದಿಂದ ಅಜ್ಞಾನದ ಕೇಡ ನೋಡಯ್ಯ; ಸತ್ಯದ ಬಲದಿಂದ ಅಸತ್ಯದ ಕೇಡ ನೋಡಯ್ಯ; ಜ್ಯೋತಿಯ ಬಲದಿಂದ ತಮಂಧದ ಕೇಡ ನೋಡಯ್ಯ; ಪರುಷದ ಬಲದಿಂದ ಅವಲೋಹದ ಕೇಡನೋಡಯ್ಯ ಕೂಡಲಸಂಗಮದೇವಾ ನಿಮ್ಮ ಶರಣರ ಅನುಭಾವದಿಂದ ಎನ್ನ ಮನದ ಕೇಡ ನೋಡಯ್ಯ' ಎಂದು ಬಸವಣ್ಣನವರು ಉದ್ಗರಿಸಿದರು. ದೇಹ–ಮನಸ್ಸಿನ ದುರ್ಗುಣ ಗಳನ್ನು ಕಳೆದುಕೊಂಡಾಗ ಅಥವಾ ಅಳಿದುಕೊಂಡಾಗ ಆ ದೇಹವೇ ನಿರ್ದೇಹವಾಗಿ ಮಾರ್ಪಡುತ್ತದೆ. ಇದು ಅನುಭಾವಗೋಷ್ಠಿಯ ಫಲಸ್ವರೂಪ. *





# ಮನೆ

–ಹುಲಿಕಲ್ ನಾಗರಾಜ, ನಂ. ೧೦೪, ಹಳೇ ತಿಪ್ಪಸಂದ್ರ, ಎನ್.ಎ.ಎಲ್. ೨ನೇ ಹಂತ, ಬೆಂಗಳೂರು–೫೬೦ ೦೦೮.

ಮನೆಯನ್ನು ಆಲಯ, ಗೃಹ, ಸದನ, ಭವನ ಎಂದೆಲ್ಲಾ ಕರೆಯುತ್ತೇವೆ. ದೇಹಕ್ಕೆ ಬೇಕಾದ ದೈಹಿಕ ಸುಖ, ಆತ್ಮಕ್ಕೆ ಬೇಕಾದ ಪಾರಮಾರ್ಥಿಕ ತೃಪ್ತಿ–ಇವೆರಡನ್ನು ನಾವು ಮನೆಯಲ್ಲಿ ಪಡೆಯಬಹುದು. ಸತಿ, ಸುತ, ಸುಖ ಹಾಗೂ ಸದ್ಗೃಹ ಇವೆಲ್ಲವೂ ಪೂರ್ವಜನ್ಮದ ಪುಣ್ಯ ವಿಶೇಷದಿಂದ ಲಭಿಸುವಂತಹವು. ಒಬ್ಬ ವ್ಯಕ್ತಿ ತನ್ನ ಸಾಧನೆ ಸಂಸ್ಕಾರದ ಮೂಲಕ ಉತ್ತಮ ಪತ್ನಿ, ಯಶೋವಂತರಾದ ಮಕ್ಕಳು, ಒಳ್ಳೆಯ ಮನೆ ಪಡೆಯುತ್ತಾನೆಂದು 'ಋಣಾನುಬಂಧ ರೂಪೇಣಾ ಪಶು ಪತ್ನಿ ಸುತಾಲಯ' ಎಂಬ ಆರ್ಯೋಕ್ತಿ ತಿಳಿಸುತ್ತದೆ.

ಒಂದು ಸುಂದರವಾದ ಮನೆಯನ್ನು ಅಧಿಕ ವೆಚ್ಚ ಮಾಡಿ ನಿರ್ಮಾಣ ಮಾಡಿದರೂ ಶಾಂತಿ, ಸಮಾಧಾನ, ಸಂತೋಷ, ಸಾಮರಸ್ಯ ಇಲ್ಲದಿದ್ದರೆ, ಅದು ಅರಮನೆಯೇ ಆಗಿರಲಿ, ಅದರಿಂದ ಯಾವ ಫಲವೂ ಇಲ್ಲ. ನಾಡಿನ ಕುಟೀರದಲ್ಲಿದ್ದರೂ ಸಾಮರಸ್ಯವಿದ್ದಲ್ಲಿ, ಅದು ಆನಂದ ತುಂಬಿದ ಆನಂದಭವನ.

ಮನುಷ್ಯನ ಶರೀರದಲ್ಲಿ ಪಂಚೇಂದ್ರಿಯಗಳಿವೆ. ದೇವಾಲಯ, ಗ್ರಂಥಾಲಯ, ನ್ಯಾಯಾಲಯ, ಸಚಿವಾಲಯ, ಮಂತ್ರಾಲಯ–ಇವೇ ಮನೆಯ ಪಂಚೇಂದ್ರಿಯಗಳು. ದೇವರ ಮನೆ; ಪುರಾಣ ಪುರುಷರ ಭಾವಚಿತ್ರಗಳು ಅವರವರ ಧರ್ಮಕ್ಕನುಗುಣವಾಗಿ ತುಂಬಿರುವ ದೇವರ ಮನೆಯಾಗಿರ ಬೇಕು. ತನ್ನ ಆರ್ಥಿಕ ಅನುಕೂಲ ಕ್ಕನುಗುಣವಾಗಿ ಒಂದು ಪುಟ್ಟ ಗ್ರಂಥಾಲಯ ಮನೆಯಲ್ಲಿ ಇರಬೇಕು. ಇನ್ನು ನ್ಯಾಯಾಲಯ; ವಾರಕ್ಕೊಮ್ಮೆ ಮನೆಯ ಸದಸ್ಯರೆಲ್ಲರೂ ಸ್ಥೈರಿ ವಾರದಲ್ಲಿ ನಡೆದ ತಮ್ಮ ಕಾರ್ಯವೈಖರಿಯನ್ನು ಚರ್ಚಿಸಿ ಮುಕ್ತ ಅವಕಾಶವನ್ನು ಪ್ರಕಟಿಸುವ ನ್ಯಾಯಾಲಯ. ಮತ್ತೊಂದು ಸಚಿವಾಲಯ ತಮ್ಮ ಕುಟುಂಬದ ಮುಂದಿನ ಯೋಜನೆಗಳನ್ನು ರೂಪಿಸಿ ಮನೆಯ ಆಡಳಿತ ಸುಸೂತ್ರವಾಗಿ ನಡೆಯುವ ಗೃಹ ಸಚಿವಾಲಯ. ಇನ್ನು ಮಂತ್ರಾಲಯ; ಇದು ಸತಿ ಪತಿಗಳಿಬ್ಬರ ಮಂತ್ರಾಲೋಚನ ಮಂದಿರ ಅಥವಾ ಶಯನಾಗೃಹ. 'ಕರಣೇಷು ಮಂತ್ರಿ' ಎಂಬಂತೆ ಸತಿ ಸಮಯವರಿತು ಗಂಡನಿಗೆ ಸಲಹೆ ನೀಡುವ ಆಲಯವು. ಈ ಮಂತ್ರಾಲೋಚನೆಯ ವಿಷಯದಲ್ಲಿ ಪತ್ನಿಯ ಪಾತ್ರ ಹೆಚ್ಚಿನದು.

ಪಾಂಡವರು ಎಲ್ಲಾ ಸಂದರ್ಭದಲ್ಲೂ ದ್ರೌಪದಿಯ ಸಲಹೆ ಪಡೆದು ಮುಂದುವರಿಯುತ್ತಿದ್ದರೆಂಬುದು ಮಹಾ ಭಾರತದ ಎಲ್ಲಾ ಘಟ್ಟದಲ್ಲೂ ಕಂಡು ಬರುತ್ತದೆ. ಇದರಿಂದಾಗಿ ಕುರುಕ್ಷೇತ್ರ ಯುದ್ಧದಲ್ಲಿ ಜಯಲಕ್ಷ್ಮಿ ಪಾಂಡವರ ಕೈ ಹಿಡಿದಳು. ಆದರೆ ದುರ್ಯೋಧನ, ತನ್ನ ಪತ್ನಿ ಭಾನುಮತಿಯ ಮಾತನ್ನಾಗಲಿ, ಗುರುಹಿರಿಯರ ಮಾತನ್ನಾಗಲೀ ಆಲಿಸಲೇ ಇಲ್ಲ. ಆದ್ದರಿಂದಲೇ ಅವನು ಅವನತಿಯ ದಾರಿಯಲ್ಲಿಯೇ ಸಾಗಿದನೆಂಬ ಅಂಶ ಮನೆ.

ಮನೆಯೆಂದರೆ ನಾಲ್ಕು ಗೋಡೆಯಿಂದ ನಿರ್ಮಿತ ವಾದ ಕೇವಲ ವಾಸಸ್ಥಾನವಲ್ಲ. ಆ ಮನೆಯಲ್ಲಿ ಸುಸಂಸ್ಕೃತ ಸರಳ ಸಜ್ಜನಿಕೆಯ ಸದಸ್ಯರು, ಧಾರ್ಮಿಕ ಆಚಾರ ವಿಚಾರ ವುಳ್ಳವರು ಇದ್ದರೆ ಮಾತ್ರ ಅದು ಮನೆಯೆನಿಸುತ್ತದೆ. ಇಲ್ಲವೆ ಬಾಡಿಗೆಗೆ ಪಡೆದ ಮದುವೆ ಛತ್ರದಂತಾಗುತ್ತದೆ. ಗೃಹಸ್ಥರ ಮನೆಯಲ್ಲಿ ಮೂರು ರತ್ನಗಳಾದ ಜಲ, ಅನ್ನ, ಸುಭಾಷಿತ ಇವು ಇರಲೇಬೇಕೆಂದು ಶಾಸ್ತ್ರಕಾರರ ಅಭಿಮತ.

*ಪೃಥಿವ್ಯಾ ತ್ರೀಣಿ ರತ್ನಾನಿ ಜನಮನ್ನ ಸುಭಾಷಿತಂ*
*ಮೂಢೈಪಾಷಾಣ ಖಂಡೇಶು ರತ್ನ*
*ಸಂಜ್ಞಾವಿಧೀಯತೇ*

ಭೂಮಿಯಲ್ಲಿ ಸರ್ವಶ್ರೇಷ್ಠವಾದ ವಸ್ತುಗಳು ಕೇವಲ ಮೂರೇ ಮೂರು. ಜಲ, ಆಹಾರ, ಒಳ್ಳೆಯ ಮಾತು. ಅದರೆ ಮೂರ್ಖರು ಕಲ್ಲಿನ ಚೂರುಗಳನ್ನು ರತ್ನಕ್ಕೆ ಹೋಲಿಸಿ ಶ್ರೇಷ್ಠವಸ್ತು ಎಂದು ಕರೆಯುವುದು ವಿಷಾದಕರ ಎಂಬುದು ಈ ಶ್ಲೋಕದ ಅರ್ಥ.

ಮನೆ ರಾಜಭವನದಂತಿದ್ದರೂ ಆ ಮನೆಯಲ್ಲಿ ವಾಸಿಸುವ ಸದಸ್ಯರು ರಾಜನುಡಿ, ರಾಜಗಾಂಭೀರ್ಯ, ರಾಜ ಮಾರ್ಗದಲ್ಲಿ ನಡೆಯುವಂತಹವರು ಇದ್ದರೆ ಆ ಮನೆಗೆ ಶೋಭೆ. ಇಲ್ಲದಿದ್ದರೆ, ಮನೆಯೊಳಗೆ ಕಾಗೆ ಗೂಗೆಯ ಹಿಂಡು ವಾಸಿಸುತ್ತದೆ ಎನ್ನುವ ಭಾವನೆ ಬರುತ್ತದೆ.

ಧಾಮು ಎಂಬ ವ್ಯಕ್ತಿ ಕೋಟಿಗಟ್ಟಲೆ ಹಣ ಸುರಿದು ಒಂದು ಮನೆಯನ್ನು ನಿರ್ಮಿಸಿದ್ದ. ಆ ಪ್ರಾಂತ್ಯದ ಜನರು ಆ ಮನೆಯ ಅಂದ, ಚಂದ, ಅಲಂಕಾರ, ಮನೆಯಲ್ಲಿರುವ ಪೀಠೋಪಕರಣವನ್ನು ನೋಡಲು ಸಹಸ್ರ ಸಂಖ್ಯೆಯಲ್ಲಿ ಬರುತ್ತಿದ್ದರು, ಒಮ್ಮೆ ಧಾಮು ಮಾರುಕಟ್ಟೆಯಲ್ಲಿ ತನ್ನ ಬಾಲ್ಯ ಗೆಳೆಯನನ್ನು ಅಚಾನಕ್ಕಾಗಿ ಸಂಧಿಸಿ ತನ್ನ ಮನೆಗೆ ಬರುವಂತೆ ಆಹ್ವಾನಿಸಿದ. ಒಂದು ದಿನ ಆ ಗೆಳೆಯ, ಧಾಮು ಮನೆಯ ಬಳಿ ಬಂದು ಹೊರ ನೋಟದಲ್ಲಿ ಆ ಮನೆಯನ್ನು ಕಂಡು ಆವಾಕ್ಕಾದ. ಮನೆಯ ದ್ವಾರವನ್ನು ಸರಿಸಿ ಮನೆ ಬಾಗಿಲಲ್ಲಿ ನಿಂತು ಕೂಗಿದ. ಒಳಗಿನಿಂದ ಧಾಮುವಿನ ಹೆಂಡತಿ ಬಂದು ಬಾಗಿಲು ತೆಗೆದು ವಿಚಾರಿಸಿ 'ಅವರಿಲ್ಲ, ಅವರಿದ್ದಾಗ ಬನ್ನಿ' ಎಂದು ಹೇಳಿ ಕಳುಹಿಸಿದಳು. ಆ ಮಿತ್ರ ಮಹಾಶಯ ಹೊರಟುಹೋದ. ಸ್ವಲ್ಪದಿನದ ನಂತರ ಮಿತ್ರರ ಭೇಟಿ ಪುನಃ ಮಾರುಕಟ್ಟೆಯಲ್ಲೇ ಆಯಿತು. ಧಾಮು ಕೇಳಿದ 'ಏನಯ್ಯಾ ಮನೆ ಕಡೆ ಬರಲೇ ಇಲ್ಲ ? 'ಇಲ್ಲ ಮಾರಾಯ ಬಂದಿದ್ದೆ; ಅಂದು ನೀನಿರಲಿಲ್ಲ' ಎಂದ. 'ನೋಡಿದೆಯಾ ಮನೆ ಹೇಗಿದೆ'? ಆ ಮಿತ್ರ ಹೇಳಿದ ; 'ಮನೆಯೇನೋ ತುಂಬಾ ಚೆನ್ನಾಗಿದೆ', ಆದರೆ ಆ ಮನೆಯ ತಲೆಬಾಗಿಲು ಇದೆಯಲ್ಲ ಅದೇ ಚೆನ್ನಾಗಿಲ್ಲ'. ಧಾಮುವಿಗೆ ಆಶ್ಚರ್ಯ, 'ಅದೇಕೆ ಹಾಗೆ ಹೇಳುತ್ತಿರುವೆ'? ಮಿತ್ರ ಒಗಟು ಬಿಡಿಸಿದ. 'ಅಯ್ಯಾ ಮನೆಗೆ ಬಾಗಿಲು ಎಂದರೆ ಮನೆಯ ಒಡತಿ; ನಾನು ಬಾಗಿಲಿಗೆ ಬಂದು ನಿಂತು ಮಾತನಾಡುವಾಗ 'ಬನ್ನಿ ಕುಳಿತುಕೊಳ್ಳಿ' ಎಂದು ಹೇಳುವ ಸೌಜನ್ಯವಿಲ್ಲದ ಆಕೆ ಮನೆಯಲ್ಲಿರುವುದರಿಂದ ಆ ಭವನ-ವನ ಅಲ್ಲದೆ ಮತ್ತೇನು? ಅಲ್ಲದೆ ಬಾಗಿಲು ಎಂದರೆ ಸೌಜನ್ಯಪೂರಿತವಾದ ಮಾತುಗಳನ್ನಾಡುವ ಮನೆಯೊಡತಿ ತಿಳಿಯಿತೆ' ಎಂದ.

ಮನೆ ಸದ್ಗೃಹಸ್ಥರ ತಪೋಭೂಮಿ. ಈ ತಪೋಭೂಮಿಯಲ್ಲಿ ಸದ್ವಿಚಾರ, ಸನ್ನಡತೆ ಹಾಗೂ ಧಾರ್ಮಿಕ ಕಾರ್ಯಗಳು ಆಗಿಂದಾಗ್ಗೆ ನಡೆಯುತ್ತಿದ್ದು ಅತಿಥಿ ಅಭ್ಯಾಗತರ ಆದರ ಆತಿಥ್ಯಕ್ಕೆ ಹೆಚ್ಚಿನ ಪ್ರಾಶಸ್ತ್ಯ ಕೊಡಬೇಕು. ಮನೆಯ ಬಾಗಿಲಿಗೆ ಒಬ್ಬ ಭಿಕ್ಷುಕ ಬಂದರೂ ಹೀನಾಮಾನವಾಗಿ ಛೇಡಿಸಿ, ಅಟ್ಟುವ ಪ್ರವೃತ್ತಿ ಗೃಹಿಣಿಯರಲ್ಲಿ ಮೂಡಬಾರದು. ಇಂತಹವರನ್ನು ಕಂಡು ಪುರಂದರ ದಾಸರು ತಮ್ಮ ಅನುಭವವನ್ನು ನಮ್ಮ ಮುಂದಿಟ್ಟಿದ್ದಾರೆ. 'ಕದವ ಹಾಕಿದಳೋ ಗಯ್ಯಾಳಿ, ಒಳಗೆ ಇರುವ ಪಾಪ ಹೊರಗೆ ಹೋಗುವುದೆಂದು'! ಜೀವನಾ ದರ್ಶಕ್ಕೆ ಎಂತಹ ಉತ್ತಮ ಮಾತುಗಳು!.

ಮನೆ ಚಿಕ್ಕದಿದ್ದರೂ ಚಿಂತೆಯಿಲ್ಲ ಮನಸ್ಸು ದೊಡ್ಡದಾಗಿರ ಬೇಕು. ಕಾರಣ ನಾವೆಲ್ಲ ವಿಶ್ವಕುಟುಂಬಿಗಳು. ನಾವಿರುವ ಮನೆ ಮಾತ್ರ ನಮ್ಮದಲ್ಲ. ಈ ವಿಶ್ವದಲ್ಲಿರುವ ಮನೆಗಳು ನಮ್ಮವು. ನಾವೆಲ್ಲ ವಿಶ್ವಭ್ರಾತೃಗಳು. ಇವನಮ್ಮವ ಅವ ಬೇರೆಯವ ಎಂಬ ತಾರತಮ್ಯ ಧೋರಣೆ ಸಹೃದಯರಲ್ಲಿ ಮೂಡಲೇಬಾರದು. ಬಸವಣ್ಣನವರ ಅನುಭವ ಮಂಟಪದ ಒಂದೇ ಸೂರಿನಡಿಯಲ್ಲಿ ಅಂಬಿಗರ ಚೌಡಯ್ಯ, ಮಡಿವಾಳ ಮಾಚಯ್ಯ, ಮೋಳಿಗೆ ಮಾರಯ್ಯ, ಹಡಪದ ಅಪ್ಪಣ್ಣ, ಮೇದರ ಕೇತಯ್ಯ, ಆಯ್ದಕ್ಕಿ ಲಕ್ಕಮ್ಮ ಇನ್ನು ಮುಂತಾದ ಅನುಭಾವಿಗಳು ಸಂಗಮ ಮೇಳೈಸಿದ್ದರಿಂದ ಅವರೆಲ್ಲರನ್ನೂ ಕುರಿತು ಬಸವಣ್ಣನವರು ನಾವೆಲ್ಲ ಒಂದೇ ಮನೆಯವರೆಂದು ಹೇಳುತ್ತಾ;

*ಇವನಾರವ ಇವನಾರವ*
*ಇವನಾರವನೆಂದೆನಿಸದಿರಯ್ಯಾ*
*ಇವ ನಮ್ಮವ, ಇವ ನಮ್ಮವ ಇವ*
*ನಮ್ಮವನೆಂದೆನಿಸಯ್ಯಾ*
*ಕೂಡಲಸಂಗಮದೇವಾ*
*ನಿಮ್ಮ ಮನೆಯ ಮಗನೆಂದಿನಿಸಯ್ಯಾ*

ಎಂತಹ ಅರ್ಥಪೂರ್ಣ ವಚನ! ಅಂದರೆ ನಮ್ಮ ಮನೆಯ ಮಗ ಎನ್ನುವುದಕ್ಕಿಂತ ಸಂಗಮದೇವನ ಮನೆಯ ಮಗನಾಗಿರಬೇಕೆಂಬುದು ಅನುಭಾವಿಗಳ ಆಶಯ.

ಹಾಗಾದರೆ ನಮ್ಮ ನಿಜವಾದ ಮನೆ ಎಲ್ಲಿದೆ? ದಾಸರು ಹೇಳುವಂತೆ, 'ಅಲ್ಲಿದೆ ನಮ್ಮ ಮನೆ, ಇಲ್ಲಿ ಬಂದೆ ಸುಮ್ಮನೆ', ನಾವು ಕಟ್ಟಿರುವ ಮನೆ, ಬಿಟ್ಟು ಹೋಗುವ ಮನೆಯಂತೆ ಯೇಸುಕ್ರಿಸ್ತರು 'ಇದು ಪ್ರಭುವಿನ ಮನೆ, ಇದನ್ನು ಹಸನಾಗಿಡಿ' ಎಂದು ಹೇಳಿದರೆ ಟಿ.ಪಿ. ಕೈಲಾಸಂರವರು ಈ ಭೂಮಿ ಮೇಲೆ ವಾಸಿಸುವುದಕ್ಕೆ ನಾವು ಕೊಡಬೇಕಾದ ಬಾಡಿಗೆ ಎಂದರೆ ಒಬ್ಬರನ್ನೊಬ್ಬರು ಪ್ರೀತಿಸುತ್ತಾ ಬಾಳುವುದು ಎಂದಿದ್ದಾರೆ. ವಿಶ್ವ ಕುಟುಂಬಿಗಳಾದ ನಮಗೆ ಪೃಥ್ವಿಯೇ ಒಂದು ಮನೆ ಅಲ್ಲವೇ? ಪೃಥ್ವಿಯಲ್ಲಿರುವ ಎಲ್ಲರೂ ನಮ್ಮ ಬಂಧುಗಳೇ ಅಲ್ಲವೇ?

❑





# ವರದಕ್ಷಿಣೆ ಪಿಡುಗು ಮತ್ತು ಪರಿಹಾರ

-ಮುಡಿಗುಂಡ ಎಸ್. ಪುಟ್ಟಪ್ಪ, ಚಂದನ ನಿಲಯ, ೧೪ನೇ ಕ್ರಾಸ್, ಬಸವೇಶ್ವರ ನಗರ, ಕೊಳ್ಳೇಗಾಲ-೫೭೧ ೪೪೦.

ಸಾಂಸ್ಕೃತಿಕ ಸಂಪ್ರದಾಯ ಪರಂಪರೆಯುಳ್ಳ ಭಾರತದಲ್ಲಿ ಇತ್ತೀಚಿನ ದಿನಗಳಲ್ಲಿ ವರದಕ್ಷಿಣೆಯ ಪಿಡುಗು ಪೆಡಂಭೂತವಾಗಿ ಸೌಮ್ಯಸ್ವಭಾವದ ಹೆಣ್ಣುಮಕ್ಕಳು ವರದಕ್ಷಿಣೆಯಂತ ಕ್ರೌರ್ಯಕ್ಕೆ ಬಲಿಯಾಗುತ್ತಿರುವುದು ಶೋಚನೀಯ.

ಭಾರತ ದೇಶದಲ್ಲಿ ಮದುವೆಯ ಶುಭಸಂದರ್ಭದಲ್ಲಿ ವರಪೂಜೆಯ ಸಮಯದಲ್ಲಿ ಸಾಂಪ್ರದಾಯಿಕವಾಗಿ ವರನಿಗೆ ವಧುವಿನ ತಂದೆ-ತಾಯಿ ಬಟ್ಟೆಗಳನ್ನು ಉಡುಗೊರೆಯಾಗಿ ಕೊಡುವಾಗ ಅದರ ಮೇಲೆ ಎಲೆಅಡಿಕೆಯನ್ನಿಟ್ಟು ವರಹಗಳನ್ನು ದಕ್ಷಿಣೆಯಾಗಿ ನೀಡುವುದು ರೂಢಿಯಲ್ಲಿ ಬಂದಿರುತ್ತದೆ. ಕಾಲ ಕ್ರಮೇಣ ಈ ಸಂಪ್ರದಾಯವು ಸಿರಿವಂತರ ಪ್ರತಿಷ್ಠೆಯ ದ್ಯೋತಕವಾಗಿ ವರಪೂಜೆಯ ಸಮಯದಲ್ಲಿ ನೆರೆದಿರುವ ಬಂಧು ಬಳಗದವರ ಎದುರಿನಲ್ಲಿ ತಮ್ಮ ಪ್ರತಿಷ್ಠೆಯನ್ನು ಪ್ರದರ್ಶಿಸುವ ಸೋಗಿನಲ್ಲಿ ಅಧಿಕವಾಗಿ ಹಣ ಮತ್ತು ಬೆಳ್ಳಿ ಬಂಗಾರವನ್ನು ಇಟ್ಟು ಕೊಡುವುದನ್ನು ರೂಢಿಸಿಕೊಂಡರು ಇಂತಹ ಕ್ರಿಯೆಗಳು ಸಿರಿವಂತರಲ್ಲಿ ಒಂದು ರೀತಿಯ ಸ್ಪರ್ಧಾತ್ಮಕ ಮನೋಭಾವವನ್ನು ಬೆಳೆಸುವುದರ ಜೊತೆಗೆ ತಮ್ಮ ಪ್ರತಿಷ್ಠೆಯನ್ನು ಹೆಚ್ಚಿಸಿಕೊಳ್ಳುವ ಕಣವಾಗಿ ಮಾರ್ಪಟ್ಟಿತು. ದಿನದಿಂದ ದಿನಕ್ಕೆ ಇದು ಪ್ರಬಲವಾಗತೊಡಗಿತು. ಹೆಣ್ಣು ಮಕ್ಕಳ ಮದುವೆ ಕಾರ್ಯವನ್ನು ನೆರವೇರಿಸಲು ಹೆಣಗಾಡುವ ಬಡವನು ಸಹ ಇಂತಹ ಪ್ರಭಾವಕ್ಕೆ ಒಳಗಾಗಿ ತನ್ನ ಕೈಲಾದಷ್ಟು ಹಣ, ಬೆಳ್ಳಿ ಬಂಗಾರವನ್ನು ವರನಿಗೆ ದಕ್ಷಿಣೆಯಾಗಿ ನೀಡಲಾರಂಭಿಸಿದನು. ದಿನ ಕಳೆದಂತೆ ಬಡವರಲ್ಲೂ ಸಹ ಇದು ಸ್ಪರ್ಧಾತ್ಮಕ ಹಾಗೂ ಅನಿವಾರ್ಯವಾಗ ತೊಡಗಿತು. ಕ್ರಮೇಣ ಇಂತಹ ಅಮಿಷಕ್ಕೆ ಬಲಿಯಾದ ವರನ ತಂದೆ ತಾಯಂದಿರು ಸಾಂಪ್ರದಾಯಿಕವಾದ ವರದಕ್ಷಿಣೆಯೆಂಬ ಉಡುಗೊರೆಯ ಕಾಣಿಕೆಯನ್ನು ವ್ಯವಹಾರ ವಿಷಯವಾಗಿ ಪರಿವರ್ತಿಸಿ ಮದುವೆಗೆ ಮುನ್ನವೇ ವರದಕ್ಷಿಣೆ ಏನು, ಎಷ್ಟು. ಎಂಬುದರ ಬಗ್ಗೆ ಚರ್ಚಿಸಿ ನಿರ್ಧರಿಸುವ ಪರಿಪಾಠವನ್ನು ರೂಢಿಸಿಕೊಂಡರು. ಸಿರಿವಂತರಿಗೆ ಇದು ಪ್ರತಿಷ್ಠೆ ಪ್ರದರ್ಶಿಸುವ ಕಣವಾದರೆ ಬಡವನ ಪಾಲಿಗೆ ಮಡಿಲಲ್ಲಿ ಕಟ್ಟಿಕೊಂಡ ಕೆಂಡವಾಯಿತು. ಹೆಣ್ಣುಮಕ್ಕಳ ಮದುವೆ ಕಾರ್ಯವನ್ನು ಮುಗಿಸುವಷ್ಟರಲ್ಲಿಯೇ ಜರ್ಜರಿತರಾದ ವಧುವಿನ ತಂದೆ ತಾಯಂದಿರು ಒಪ್ಪಿಕೊಂಡ ವರದಕ್ಷಿಣೆಯನ್ನು ಕೊಡಲಾಗದೇ ವರನ ತಂದೆ ತಾಯಿಯರಿಂದ ಅವಮಾನಿತರಾಗುವ ಮಟ್ಟಕ್ಕೆ ವರದಕ್ಷಿಣೆಯೆಂಬ ಈ ಪೆಡಂಭೂತ ತನ್ನ ಕದಂಬ ಬಾಹುಗಳನ್ನು ಚಾಚತೊಡಗಿತು, ವಧುವಿನ ತಂದೆ ತಾಯಿ ವರದಕ್ಷಿಣೆ ಕೊಡಲು ಅಸಮರ್ಥರಾದಾಗ ಇದರ ಪರಿಣಾಮ ವಧುವಿನ ಮೇಲೆ ಪ್ರತಿಕೂಲವಾಗತೊಡಗಿತು. ಅತ್ತೆ ಮಾವಂದಿರ ನಿಂದನೆಯ ಮಾತುಗಳು ಕೈಹಿಡಿದ ಪತಿಯ ತಾತ್ಸಾರಕ್ಕೆ ಒಳಗಾಗಿ ಹೆಣ್ಣು ಮಕ್ಕಳು ತಮ್ಮ ಸುಖ ಸಂತೋಷಗಳನ್ನು ವರದಕ್ಷಿಣೆ ಎಂಬ ಪೆಂಡಭೂತಕ್ಕೆ ಬಲಿಕೊಟ್ಟು ನರಕದ ಬಾಳನ್ನು ಬದುಕುವ ಹೀನಾಯ ಸ್ಥಿತಿ ತಲುಪುವಂತಾಯಿತು. ಸೌಮ್ಯಸ್ವಭಾವದ ಹೆಣ್ಣುಮಕ್ಕಳಂತು ಇಂತಹ ಹಿಂಸೆಗಳನ್ನು ತನ್ನ ಹೆತ್ತವರ ಮುಂದೆ ಹೇಳಿಕೊಳ್ಳಲಾಗದೇ ತಾವು ಅನುಭವಿಸಲು ಸಾಧ್ಯವಾಗದೇ ಸಾವಿಗೆ ಶರಣಾಗುವ ತೀರ್ಮಾನಕ್ಕೆ ಬರಲಾರಂಭಿಸಿದರು.

ಇತ್ತೀಚಿನ ದಿನಗಳಲ್ಲಿ ನಿವೇಶನ, ಕಾರು, ಬಂಗಲೆಗಳನ್ನು ವರದಕ್ಷಿಣೆ ರೂಪದಲ್ಲಿ ಕೊಡುತ್ತಿರುವುದು ದುರದೃಷ್ಟಕರ. ವರನ ತಂದೆ ತಾಯಂದಿರು ಮಗನ ವಿದ್ಯಾಭ್ಯಾಸ ಹಾಗೂ ಇನ್ನಿತರ ಖರ್ಚುಗಳನ್ನು ಬರೆದಿಟ್ಟು ವಧುವಿನ ತಂದೆ ತಾಯಿಯಿಂದ ಖರ್ಚನ್ನು ಭರಿಸಿಕೊಂಡಿರುವ ದುಷ್ಟಾಂತಗಳು ಬಹಳಷ್ಟು ಸಂಖ್ಯೆಯಲ್ಲಿ ಇವೆ. ಮದುವೆಯ ಸಮಯದಲ್ಲಿ ಪಡೆದ ವರದಕ್ಷಿಣೆಯಲ್ಲದೇ ತಮಗೆ ಹಣದ ತೊಂದರೆ ಇದ್ದಾಗ ವಧುವನ್ನು ಹಿಂಸಿಸಿ ತಂದೆಯ ಮನೆಯಿಂದ ಹಣ ಪಡೆದು ಬರುವಂತೆ ಬಲಾತ್ಕರಿಸುವ ನೀಚರು ಅನೇಕ ಮಂದಿ ಇದ್ದಾರೆ. ಒತ್ತಾಯಕ್ಕೆ ಬಗ್ಗದ ಹೆಣ್ಣುಮಕ್ಕಳನ್ನು ಸಂಶಯಕ್ಕೆಡೆಕೊಡದಂತೆ ಬುದ್ಧಿವಂತಿಕೆಯಿಂದ ಹತ್ಯೆಗೈದು ಸಿಕ್ಕಿಕೊಂಡವರು ಹಲವರಾದರೆ, ಸಿಕ್ಕಿಕೊಳ್ಳದವರೂ ಅನೇಕ ಮಂದಿ ಇದ್ದಾರೆ, ವರದಕ್ಷಿಣೆಯ ಕದಂಬಬಾಹುವಿನ ಹಿಡಿತದಲ್ಲಿ ಸಿಕ್ಕಿ ನರಳುತ್ತಿರುವ ಇಂತಹ ಎಷ್ಟೋ ಹೆಣ್ಣು ಮಕ್ಕಳಿಗೆ ವಿಮೋಚನೆ ಇಲ್ಲ ಎಂದು ತಿಳಿದೂ ತಿಳಿದೂ ಹೆಣ್ಣುಮಕ್ಕಳನ್ನು ವರದಕ್ಷಿಣೆಯ ವ್ಯಾಮೋಹಿಗಳ ಸಂಚಿನ ಬಲೆಗೆ ಸಿಲುಕಿಸುತ್ತಿರುವ ಇದನ್ನೆ ಕರ್ತವ್ಯವೆಂದು ಭಾವಿಸಿರುವ ತಂದೆ ತಾಯಂದಿರಿಗೆ ಜ್ಞಾನದ ಕಣ್ಣು ತೆರೆಯುವುದು ಎಂದು? ಭಾರತ ದೇಶದಲ್ಲಿ ಮದುವೆಗಳನ್ನು ಬಿಗಿಯಾದ ಕಾನೂನು ವ್ಯವಸ್ಥೆಗೆ ಒಳಪಡಿಸದೇ ಇರುವುದು ಸಹ ಒಂದು ರೀತಿಯಲ್ಲಿ ವರದಕ್ಷಿಣೆ ಆಸೆಗಾಗಿ ಒಂದಕ್ಕಿಂತ ಹೆಚ್ಚು ಮದುವೆ ಮಾಡಿಕೊಂಡು ಕಾನೂನಿನ

ಕಪಿಮುಷ್ಠಿಯಿಂದ ತಪ್ಪಿಸಿಕೊಳ್ಳಲು ಅನುಕೂಲಕರವಾಗಿದೆ. ಉದಾಹರಣೆಗೆ ಹಿಂದಿನ ವರ್ಷಗಳಲ್ಲಿ ಸರಿಯಾದ ಹುಟ್ಟಿದ ದಿನಾಂಕವು ದಾಖಲೆಯಿಂದ ದೃಢಪಡದೇ ಇದ್ದರೂ ವ್ಯಕ್ತಿಯ ಮುಖನೋಡಿ ಎತ್ತರ ನೋಡಿ ಜನ್ಮದಿನಾಂಕ ದಾಖಲಿಸಿಕೊಂಡು ಅನುಕೂಲಕ್ಕೆ ತಕ್ಕಂತೆ ಮಾರ್ಪಾಡು ಮಾಡಿಕೊಳ್ಳುತ್ತಿದ್ದರು. ಇಂತಹ ಕ್ರಿಯೆಗಳಿಂದ ಸರ್ಕಾರಿ ಸೇವೆಯಲ್ಲಿ ಅಣ್ಣನಿಗೆ ಮೊದಲು ತಮ್ಮ ನಿವೃತ್ತಿಯಾಗುವುದು ಅಕ್ಕನಿಗೆ ಮೊದಲು ತಂಗಿ ನಿವೃತ್ತಿಯಾಗಿರುವ ಅನೇಕ ದೃಷ್ಟಾಂತಗಳು ಕಂಡು ಬರುತ್ತದೆ. ಇತ್ತೀಚಿನ ವರ್ಷಗಳಲ್ಲಿ ಜನನ ಮರಣ ನೋಂದಣಿಯನ್ನು ಕಾನೂನಿನ ವ್ಯಾಪ್ತಿಯೊಳಗೆ ಬಿಗಿಗೊಳಿಸಿದ್ದರಿಂದ ಶಾಲೆಗಳಲ್ಲಿ ಮಕ್ಕಳ ವಾಸ್ತವವಾದ ಹುಟ್ಟಿದ ದಿನಾಂಕವನ್ನು ನಮೂದಿಸುವುದು ಅನಿವಾರ್ಯವು ಹಾಗೂ ಅನುಕೂಲವು ಆಯಿತು. ಇದೇ ರೀತಿ ಭಾರತದಲ್ಲಿ ನಡೆಯುವ ಪ್ರತಿಯೊಂದು ಮದುವೆಯನ್ನು ಸರಳೀಕರಣಗೊಳಿಸುವಿಕೆ ಹಾಗೂ ನೋಂದಣಿ ಮಾಡಿಸುವುದನ್ನು ಬಿಗಿಯಾದ ಕಾನೂನು ವ್ಯವಸ್ಥೆಯೊಳಗೆ ಅಳವಡಿಸುವುದು ಅತ್ಯಂತ ಪರಿಣಾಮಕಾರಿಯಾಗಲಿದೆ. ಇದರಿಂದ ವರದಕ್ಷಿಣೆ ಆಸೆಗಾಗಿ ಒಂದಕ್ಕಿಂತ ಹೆಚ್ಚು ಮದುವೆಯಾಗುವುದನ್ನು ನಿರ್ಬಂಧಿಸಲು ಮತ್ತು ಮದುವೆ ಸಮಾರಂಭಗಳಿಗೆ ಅಧಿಕ ಖರ್ಚು ಮಾಡುವುದನ್ನು ಹಾಗೂ ಮುಗ್ಧ ಹೆಣ್ಣುಮಕ್ಕಳ ರಕ್ಷಣೆಗೆ ಸಹಕಾರಿಯಾಗುವುದರ ಜೊತೆಗೆ ವರದಕ್ಷಿಣೆಯ ಪಿಡುಗು ಪೆಡಂಭೂತವಾಗಿ ಕಾಡುವುದನ್ನು ಸಾಧ್ಯವಾದಷ್ಟು ಮಟ್ಟಿಗೆ ನಿಯಂತ್ರಿಸಲು ಸಾಧ್ಯವಾಗಬಹುದು. ನಿಯಮ ಮುರಿದವರಿಗೆ ಸರ್ಕಾರಿ ಸವಲತ್ತುಗಳನ್ನು ತಡೆಹಿಡಿಯುವುದು ಕಾನೂನು ಬಿಗಿಗೊಳಿಸಲು ಪೂರಕ ಕ್ರಮವಾಗಬಹುದು. ಚುನಾವಣೆ ನೀತಿ ಸಂಹಿತೆಯಂತೆ ವಿವಾಹಗಳ ನೀತಿಸಂಹಿತೆಯನ್ನು ತಯಾರಿಸಿ ಅಳವಡಿಸುವುದು ಸಹ ಕಾನೂನು ಬಿಗಿಗೊಳಿಸುವ ಕ್ರಮಕ್ಕೆ ಪೂರಕವಾಗುತ್ತದೆ.

ಎಲ್ಲಕ್ಕಿಂತ ಹೆಚ್ಚಾಗಿ ಹೆಣ್ಣುಮಕ್ಕಳ ಪೋಷಕರು ವರದಕ್ಷಿಣೆ ಆಸೆಪಡುವ ವರಗಳ ಬಗ್ಗೆ ಅತ್ಯಂತ ಎಚ್ಚರಿಕೆಯಿಂದ ಇರುವುದು ಒಳಿತು. ವರನ ಕುಟುಂಬದವರ ಆಡಂಬರದ ಸೋಗಿಗೆ ಮಾರುಹೋಗಿ ಕೇಳಿದಷ್ಟು ವರದಕ್ಷಿಣೆ ಕೊಟ್ಟು ತಮ್ಮ ಮಕ್ಕಳನ್ನು ಮೃತ್ಯು ಕೂಪಕ್ಕೆ ತಳ್ಳುವ ಮೋಹವನ್ನು ಬಿಡಬೇಕು, ಸಾಲಮಾಡಿ ತಮ್ಮ ಸಾಮರ್ಥ್ಯಕ್ಕಿಂತ ಅಧಿಕವಾಗಿ ಖರ್ಚುಮಾಡಿ ಎರಡು ದಿನ ತಲೆಎತ್ತಿ ಮೆರೆದಾಡಿ ಸಾಲದ ಹೊರೆಯಿಂದ ಜರ್ಜರಿತರಾಗಿ ಜೀವನವೆಲ್ಲಾ ತಲೆತಗ್ಗಿಸಿಕೊಂಡು ಓಡಾಡುವ ಬದಲು ತನ್ನ ಸಾಮರ್ಥ್ಯಕ್ಕೆ ತಕ್ಕಂತೆ ಸರಳ ವಿವಾಹ ಮಾಡಿ ಎರಡು ದಿನ ತಲೆತಗ್ಗಿಸಿ ವ್ಯವಹರಿಸಿದರೆ ಜೀವನವೆಲ್ಲಾ ತಲೆಎತ್ತಿ ಬದುಕುವ ಮುಂದಾಲೋಚನೆ ಮಾಡಿದಲ್ಲಿ ಬಡವನ ಬಾಳು ಸಹ ಸುಂದರವಾಗುವುದರಲ್ಲಿ ಸಂದೇಹವಿಲ್ಲ. ಅದ್ದೂರಿ ಮದುವೆ ಸಮಾರಂಭಗಳನ್ನು ಏರ್ಪಡಿಸುವುದು ಅಧಿಕವಾದ ವರದಕ್ಷಿಣೆ ನೀಡುವ ಚಾಪಲ್ಯಕ್ಕೆ ಒಳಗಾಗಿ ಬಡವರನ್ನು ದಿಕ್ಕು ತಪ್ಪಿಸುತ್ತಿರುವ ಶ್ರೀಮಂತರು ಸಮಾಜದ ಒಳಿತನ್ನು ಬಯಸುವ ಮಠಮಾನ್ಯಗಳ ಮಠಾಧೀಶರು ಧರ್ಮಾಧಿಕಾರಿಗಳು ನಡೆಸುವ ಸಾಮೂಹಿಕ ವಿವಾಹಗಳಲ್ಲಿ ತಮ್ಮ ಮಕ್ಕಳ ವಿವಾಹ ಕಾರ್ಯವನ್ನು ನೆರವೇರಿಸಿದಲ್ಲಿ ಇಂತಹ ಬದಲಾವಣೆಯಿಂದ ಬಡವರಿಗೆ ದಾರಿದೀಪವಾಗುವುದರಲ್ಲಿ ಯಾವುದೇ ಸಂದೇಹವಿಲ್ಲ. ಇಂತಹ ಕ್ರಿಯೆಗಳು ಭಾರತ ದೇಶದಲ್ಲಿ ನಡೆದಲ್ಲಿ ಅತ್ಯಂತ ಪರಿಣಾಮಕಾರಿ ಸುಧಾರಣೆಯಾಗಬಹುದು ಎಂಬುದು ನಿರ್ವಿವಾದ. ❑

**ದ್ವಿತೀಯ ತುಳುವರೆ ಆಯನೊ-2009 ರಾಜ್ಯಮಟ್ಟದ ತುಳು ಜನಪದ ಜಾತ್ರೆಯ ಸಾಂಸ್ಕೃತಿಕ ಕಾರ್ಯಕ್ರಮಕ್ಕೆ ಆಹ್ವಾನ.**

ಈ ಮೇಲಿನ ರಾಜ್ಯಮಟ್ಟದ ತುಳು ಜನಪದ ಜಾತ್ರೆಯು ಜನವರಿ ೨೩, ೨೪, ೨೫, ೨೦೦೯ರಂದು ಕಾಸರಗೋಡು ಬದಿಯಡ್ಕದ ಬೋಳುಕಟ್ಟೆ ತುಳು ಜನಪದ ಸಾಂಸ್ಕೃತಿಕ ಕಲಾ ಪ್ರದರ್ಶನವನ್ನು ಹಮ್ಮಿಕೊಳ್ಳಲಾಗಿದೆ. ಕಾಸರಗೋಡು ಜಿಲ್ಲೆಯ ಬದಿಯಡ್ಕದ ತುಳುವರ ಸಾಂಸ್ಕೃತಿಕ ರಾಜಧಾನಿಯಲ್ಲಿ ನಡೆಯುವ ಮೂರು ದಿನಗಳ ಸಾಂಸ್ಕೃತಿಕ ಉತ್ಸವದಲ್ಲಿ ಕರ್ನಾಟಕ ರಾಜ್ಯದ ೩೦ ಜಿಲ್ಲೆಗಳ ಹಾಗೂ ಗಡಿನಾಡು ಹೊರನಾಡುಗಳನ್ನು ಪ್ರತಿನಿಧೀಕರಿಸುವ ಸಾಂಸ್ಕೃತಿಕ ಜಾನಪದ ಕಲಾ ಪ್ರದರ್ಶನಕ್ಕೆ ಅವಕಾಶವನ್ನು ಕಲ್ಪಿಸಲಾಗಿದೆ.

ಗ್ರಾಮೀಣ ಪ್ರದೇಶದಲ್ಲಿರುವ ವಿವಿಧ ಸಮುದಾಯಗಳ ಕಲಾ ಪ್ರದರ್ಶನಗಳನ್ನು ನೀಡಲಿಚ್ಛಿಸುವವರು, ಕಲಾ ಪ್ರದರ್ಶನದ ಅವಧಿ, ತಂಡದ ಒಂದು ಛಾಯಾಚಿತ್ರ, ಚುಟುಕು ಪರಿಚಯ, ಹೆಸರು, ಪೂರ್ಣ ವಿಳಾಸದೊಂದಿಗೆ, ದೂರವಾಣಿ ಮೊಬೈಲ್ ಸಂಖ್ಯೆಯನ್ನು ಬರೆದು ಅಂಚೆಯ ಮೂಲಕ ಒಂದು ವಾರದೊಳಗಾಗಿ ಒಪ್ಪಿಗೆ ಪತ್ರವನ್ನು ಕಳುಹಿಸಿಕೊಡಬೇಕು.

ಹೆಚ್ಚಿನ ಮಾಹಿತಿಗಾಗಿ ಶಿವರಾಮ ಕಾಸರಗೋಡು, ಅಧ್ಯಕ್ಷರು ತುಳುವರೆ ಆಯನೊ-೨೦೦೯, ಸಾಂಸ್ಕೃತಿಕ ಸಮಿತಿ, ಫಾರೆಕಟ್ಟೆ ರಸ್ತೆ, ಅಂಚೆ ರಾಮದಾಸ ನಗರ, ಕಾಸರಗೋಡು-೬೭೧ ೧೨೪. ಕೇರಳ ರಾಜ್ಯ ದೂರವಾಣಿ: ೦೪೯೯೪-೨೨೭೯೧೧, ಮೊ: ೦೯೪೪೪೮೫೨೦೧೬ ಇವರನ್ನು ಸಂಪರ್ಕಿಸಬಹುದು.





## ಸೂರ್ಯಪಾನ

ಕೃಪೆ : ಸುಧಾ ವಾರಪತ್ರಿಕೆ

ನಮ್ಮ ಪ್ರಾಚೀನ ಗ್ರಂಥಗಳಲ್ಲಿ, ಪುರಾಣಗಳಲ್ಲಿ ಅಸಂಖ್ಯಾತ ಋಷಿಮುನಿಗಳು, ದೇವತೆಗಳು ಆಹಾರವಿಲ್ಲದೆ ಅನೇಕ ದಿವಸಗಳನ್ನು, ವರ್ಷಗಳನ್ನು ಕಳೆದ ಉಲ್ಲೇಖ ಬರುತ್ತದೆ. ಈ ಋಷಿಮುನಿಗಳು, ದೇವತೆಗಳು ಬೇರೆ ಲೋಕದಲ್ಲಿ ಸಂಚರಿಸುವ ವ್ಯಕ್ತಿಗಳಾಗಿರಲಿಲ್ಲ. ಅವರು ಈ ಭೂಮಿಯ ಮೇಲೇ ಇದ್ದವರು; ಇಲ್ಲೇ ಓಡಾಡಿದವರು. ಇನ್ನು ನಮ್ಮ ಮನೆಗಳಲ್ಲಂತೂ ನಮ್ಮ ಅಜ್ಜ-ಅಜ್ಜಿಯರು ಕಥೆ ಹೇಳುವಾಗ ಏನೂ ಆಹಾರ ಸೇವಿಸದೆ ನಿರಾಯಾಸವಾದ ಜೀವನವನ್ನು ಸಾಗಿಸಿದ ಅನೇಕ ಮಹಾಮಹಿಮರ ವೃತ್ತಾಂತಗಳನ್ನು ಬಹಳ ಸಹಜವಾಗಿ ಹೇಳಿರುತ್ತಾರೆ. 'ಪಾರ್ವತಿ ಶಿವನನ್ನು ಕುರಿತು ತಪಸ್ಸು ಮಾಡಲು ವರ್ಷಗಟ್ಟಳೆ ಕುಳಿತಾಗ ಅವಳು ಆಹಾರವನ್ನಿರಲಿ, ಒಂದು ಎಲೆಯನ್ನೂ ಸೇವಿಸಲಿಲ್ಲ. ಹಾಗಾಗಿ ಅವಳಿಗೆ 'ಅಪರ್ಣಾ' ಎಂಬ ಹೆಸರು ಅಂಟಿಕೊಂಡಿತು. ಗಾಳಿಯ ಸೇವನೆ ಮಾತ್ರ ಅವಳ ಜೀವವನ್ನು ಹಿಡಿದಿಟ್ಟಿತ್ತು' ಎನ್ನುತ್ತದೆ ಪುರಾಣ.

ಇನ್ನು ದೇವತೆಗಳ ವಿಷಯ, ಯಜಮಾನನು ನಡೆಸುವ ಯಜ್ಞದಲ್ಲಿ (ಸಮಾವೇಶದಲ್ಲಿ) ಕೊಡುವ ಹವಿಸ್ಸನ್ನು ಮಾತ್ರ ಅವರು ಸ್ವೀಕರಿಸಿದ ಮಾತು ಋಗ್ವೇದದಲ್ಲಿ ಬರುತ್ತದೆ. ಈ ಹವಿಸ್ಸು ಯಜಮಾನ ನೀಡುತ್ತಿದ್ದ ಸೋಮಪಾನ, ಈ ಸಂದರ್ಭದಲ್ಲಿ 'ಸುತೇರಣಂ' ಎಂಬ ಪದವನ್ನು ಋಗ್ವೇದ ಉಪಯೋಗಿಸುತ್ತದೆ. ಅಂದರೆ ಇಷ್ಟಪಟ್ಟು ಹಿಂಡಿದ ಸೋಮರಸವನ್ನು ದೇವತೆಗಳು ಕುಡಿಯುತ್ತಿದ್ದರು ಎಂದರ್ಥ. ಹಾಗಾಗಿ ಮುಂದೆ ಇದರ ಮೇಲೆ ವ್ಯಾಖ್ಯಾನ ಮಾಡುವಾಗ, ದೇವತೆಗಳ ಅಮರತ್ವಕ್ಕೆ ಅವರು ಆಹಾರ ಸೇವಿಸದೇ ಹೋದರೂ ಚಟುವಟಿಕೆಯಿಂದ ಓಡಾಡುವುದಕ್ಕೆ ಕಾರಣ ಸೋಮಪಾನ ಎಂಬ ಮಾತು ಜನಜನಿತವಾಯಿತು. (ಹಾಗೆ ನೋಡಿದರೆ ದೇವತೆಗಳು ದಿನನಿತ್ಯ ಕುಡಿಯುವ ಪಾನೀಯ ಸೋಮಪಾನವಾಗಿರಲಿಲ್ಲ. ಯಜ್ಞದ ಯಜಮಾನ ದೇವತೆಗಳನ್ನು ವಿಶೇಷವಾಗಿ ಆಹ್ವಾನಿಸಿದಾಗ ಹಾಲು, ತುಪ್ಪ, ಜೇನಿನಿಂದ ಹದವಾಗಿ ಮಿಶ್ರಮಾಡಿದ ಆಗತಾನೇ ಹಿಂಡಿದ ಸೋಮರಸವನ್ನು ಸಿದ್ಧಪಡಿಸುತ್ತಿದ್ದ. ಅದನ್ನು ಹೆಚ್ಚಿಗೆ ಹೊತ್ತು ಇಡುವ ಹಾಗೆ ಇರಲಿಲ್ಲ.)

ಇರಲಿ, ದೇವತೆಗಳ ನಿರಾಹಾರ ಚಟುವಟಿಕೆಯ ಮೂಲ ಕಾರಣವಾಗಿದ್ದ ಸೂರ್ಯಪಾನ ಕಾಲಗರ್ಭದಲ್ಲಿ ಅಡಗಿ ಹೋಯಿತು. ಅದನ್ನು ಮತ್ತೆ ಮನುಕುಲಕ್ಕೆ ಪರಿಚಯಿಸಿದ ಶ್ರೇಯಸ್ಸು ಹೀರಾ ಮಾನೆಕ್ ಅವರಿಗೆ ಸೇರುತ್ತದೆ. ಇಂದು ನಾವು ಪ್ರಯೋಗ ರೂಪದಲ್ಲಿ ತಂದಿರುವ ಸೂರ್ಯಪಾನಕ್ಕೆ (ಎಚ್.ಆರ್.ಎಂ. ಫಿನಾಮಿನನ್) ಎಂದೇ ಹೆಸರು.

**ಸೂರ್ಯಪಾನ ಎಂದರೇನು ?**

ನಾವು ನಮ್ಮ ದೈನಂದಿನ ಅಗತ್ಯಗಳಿಗೆ ಅಪ್ರತ್ಯಕ್ಷವಾಗಿ ಸೂರ್ಯನನ್ನು ಆಶ್ರಯಿಸಿದ್ದೇವೆ. ಸೂರ್ಯನ ಶಕ್ತಿಯನ್ನು ಉಪಯೋಗಿಸಿಕೊಂಡು ಸಸ್ಯಜಾತಿಗಳು, ಅವುಗಳನ್ನು ಆಹಾರವಾಗಿಸಿಕೊಂಡು ಪ್ರಾಣಿ ಜಾತಿಗಳು ಬೆಳೆಯುತ್ತವೆ ಮನುಷ್ಯ ಸಸ್ಯಜನ್ಮ ಆಹಾರವನ್ನಾಗಲೀ, ಪ್ರಾಣಿಜನ್ಯ ಆಹಾರವನ್ನಾಗಲೀ ಉಪಯೋಗಿಸಿದಾಗ ಅವನು ಸೂರ್ಯನ ಶಕ್ತಿಯನ್ನು ಅಪ್ರತ್ಯಕ್ಷವಾಗಿ ಉಪಯೋಗಿಸಿಕೊಂಡು ತನ್ನ ದೈನಂದಿನ ಶಕ್ತಿಯ ಅಗತ್ಯಗಳನ್ನು ಪೂರೈಸಿಕೊಳ್ಳುತ್ತಾನೆ ಎಂಬುದು ಇದರರ್ಥ.

ಈ ಅಪ್ರತ್ಯಕ್ಷ ಮಾರ್ಗವನ್ನು ಬಿಟ್ಟು, ಮನಷ್ಯನು ನೇರವಾಗಿ ಸೂರ್ಯನ ಶಕ್ತಿಯನ್ನು ಉಪಯೋಗಿಸಿಕೊಳ್ಳುವಂತಾದರೆ? ಸಸ್ಯಗಳು ತಮ್ಮಲ್ಲಿರುವ ಕ್ಲೋರೊಫಿಲ್ ಉಪಯೋಗಿಸಿ ತಮಗೆ ಬೇಕಾದ ಆಹಾರವನ್ನೂ, ಶಕ್ತಿಯನ್ನೂ ಉಪಯೋಗಿಸುವಂತೆ, ಮನುಷ್ಯನೂ ತನ್ನ ದೇಹದಲ್ಲಿ ಶಕ್ತಿಯನ್ನು ಸೂರ್ಯನಿಂದ ಪಡೆಯುವಂತಾದರೆ? ಆಗ ಮನುಷ್ಯನಿಗೆ ಅಹಾರದ ಅಗತ್ಯ ಬೀಳುವುದಿಲ್ಲ. ಅವನು ನೇರವಾಗಿ ಸೂರ್ಯನಿಂದ ಶಕ್ತಿಯನ್ನು ಪಡೆದು ತನ್ನ ದೈಹಿಕ ಅಗತ್ಯಗಳಿಗೆ ಬೇಕಾದಂತೆ ಈ ಶಕ್ತಿಯನ್ನು ಮಾರ್ಪಡಿಸಿಕೊಳ್ಳಬಲ್ಲ. ಆಹಾರವೇ ದೇಹದ ದೋಷಗಳಿಗೂ, ಸಾಮಾಜಿಕ ಕಲಹಕ್ಕೂ ಕಾರಣ, ಈ ಮೂಲವನ್ನೇ ಕಿತ್ತೆಸೆದರೆ ತಾವೇ ತಾನಾಗಿ ದೇಹದ ಆರೋಗ್ಯ ಸಾಮಾಜಿಕ ಶಾಂತಿ ನೆಲಸುತ್ತದೆ.

ಈ ರೀತಿ ಸೂರ್ಯನ ಶಕ್ತಿಯನ್ನು ಪಡೆಯುವ ಕ್ರಿಯೆ ಕಣ್ಣಿನ ಮೂಲಕವಾಗಲೀ, ಚರ್ಮದ ಮೂಲಕವಾಗಲೀ ಅಥವಾ ದೇಹದ ಇನ್ನಾವುದೇ ಅಂಗದ ಮೂಲಕವಾಗಲೀ ನಡೆಯಬಹುದು. ಮನುಷ್ಯ ಹುಟ್ಟಿದಾಗಿನಿಂದ ಒಂದಲ್ಲ ಒಂದು ರೀತಿಯಲ್ಲಿ ಸೂರ್ಯನ ಶಕ್ತಿಯನ್ನು ಪಡೆಯುತ್ತಲೇ ಇದ್ದಾನೆ. ಸೂರ್ಯನಿಂದ ಹರಡುವ ವಿಶ್ವ ಕಿರಣಗಳು

(Cosmic rays) ಸತತವಾಗಿ ದೇಹದ ಮೂಲಕ ಹರಿದು ಹೋಗುತ್ತಿರುತ್ತದೆ. ಆದರೆ ಸದ್ಯಕ್ಕೆ ಕಣ್ಣಿನ ಮೂಲಕ ಸೂರ್ಯ ಶಕ್ತಿಯನ್ನು ಪಡೆಯುವ ಕ್ರಿಯೆ, ಅದನ್ನು ದೈಹಿಕ ಅಗತ್ಯಗಳಿಗೆ ಮಾರ್ಪಡಿಸಬಲ್ಲ ತಂತ್ರ ನಮಗೆ ಹಸ್ತಗತವಾಗಿದೆ. ಅದನ್ನೇ ನಾವು 'ಸೂರ್ಯಪಾನ' ಎಂದು ಇಲ್ಲಿ ಸಂಕೇತಿಸುತ್ತೇವೆ.

**ಋಗ್ವೇದದಲ್ಲಿ ಸೂರ್ಯಪಾನ :**

ಋಗ್ವೇದದಲ್ಲಿ ಸೂರ್ಯಪಾನದ ಮಾತು ಬರುತ್ತದೆ. ಋಗ್ವೇದದ ಉದ್ದಕ್ಕೂ ನಮಗೆ ದೇವತೆಗಳ, ಋಷಿಗಳ ಸಾಹಚರ್ಯ ಮನುಷ್ಯನ ಜೊತೆ ಕಂಡುಬರುತ್ತದೆ. ನಂತರದ ದಿನಗಳಲ್ಲಿ 'ಇವೆಲ್ಲ ಕಲ್ಪನೆಯ ಮಾತುಗಳು, ದೇವತಾ ವಿಷಯಗಳನ್ನು ತಿಳಿಸುವ ಪ್ರಯತ್ನಗಳು. ತತ್ವ ವೇದಾಂತಗಳನ್ನು ತಿಳಿಸುವ ಛಂದೋಬದ್ಧ ಮಾತುಗಳು' ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಆದರೂ ಋಗ್ವೇದದ ಋಕ್‌ಗಳನ್ನು ಯಥಾವತ್ತಾಗಿ ಅರ್ಥೈಸಿದರೆ ನಮಗೆ ದೇವತೆಗಳು, ಋಷಿಗಳು ಮೇಲ್‌ಸ್ತರದ ಸಾಮಾಜಿಕ ಜೀವಿಗಳು. ಇಂದ್ರ, ಅಗ್ನಿ, ವರುಣ, ಅಶ್ವಿನಿ ಇತ್ಯಾದಿ ದೇವತೆಗಳು ಪರಮಪೂಜ್ಯರು, ಗೌರವಾರ್ಹರು, ಅಷ್ಟೇ ಅಲ್ಲ ಭಯಪಡಬೇಕಾದವರು, ಅವರನ್ನು ಆಧರಿಸಿ ಗೌರವಿಸಬೇಕಾದ್ದು ಮನುಷ್ಯನ ಕರ್ತವ್ಯ. ದೇವತೆಗಳನ್ನು ಸಂತೃಪ್ತರನ್ನಾಗಿಸಲು ಮನುಷ್ಯನ ಪೈಕಿ ಉಳ್ಳವನು. ರಾಜ್ಯಾಡಳಿತ ನಡೆಸುವವನು(ಯಜಮಾನ) ಆಗಾಗ್ಗೆ ಯಜ್ಞಗಳನ್ನು ನಡೆಸುತ್ತಿದ್ದ. ಈ ಯಜ್ಞಗಳು ಮನುಷ್ಯರು ದೇವತೆಗಳ ಪೂಜೆಗೆ ಏರ್ಪಡಿಸಿದ ಸಮಾವೇಶಗಳಾಗಿರುತ್ತಿದ್ದವು. ('ಯಜ್ಞೇನ ಯಜ್ಞಮಯಂತದೇವಾ:')

ಯಜಮಾನನು ತನಗೆ ಪ್ರಿಯವಾದ, ತನ್ನ ಬೆಂಬಲಕ್ಕೆ ದೇವತೆಯನ್ನು ಈ ಯಜ್ಞಕ್ಕೆ ಆಹ್ವಾನಿಸುತ್ತಿದ್ದ. ಹಾಗೆ ಆಹ್ವಾನಿಸುವಾಗ ಪ್ರಧಾನವಾಗಿ ಅಗ್ನಿಯ(ಜಾತವೇದಃ) ನೆರವನ್ನು ಪಡೆಯುತ್ತಿದ್ದ. ಇಂದ್ರನನ್ನು ಕರೆಯಲಾಗಲೀ, ಅಶ್ವಿನಿ ದೇವತೆಗಳನ್ನು ಕರೆಯಲಾಗಲೀ, ಅಷ್ಟೇಕೆ ಅಪ್ರಧಾನವಾದ ಮರುತ್ ದೇವತೆಗಳನ್ನು ಕರೆಯಲಾಗಲೀ ಅವನಿಗೆ ಅಗ್ನಿಯೇ ಬೇಕು. ತಮ್ಮ ಮಾತನ್ನು ತಳ್ಳಿಹಾಕಿದರೂ, ಅಗ್ನಿಯ ಮೂಲಕ ಹೇಳಿ ಕಳುಹಿಸಿದರೆ ತಳ್ಳಿಹಾಕುವುದಿಲ್ಲ ಎಂಬ ಬಗ್ಗೆ ನಂಬಿಕೆಯಿದ್ದಿರಬೇಕು. ಹಾಗಾಗಿ ಲಕ್ಷ್ಮೀ ಮಾತೆಯನ್ನು ಕರೆಯುವಾಗಲೂ, 'ತಾಂ ಮ ವಹ ಜಾತವೇದೋ ಲಕ್ಷ್ಮೀಂ ಅನಪಗಾಮಿನೀಂ' ಎಂದು ಅಗ್ನಿಯನ್ನು ಯಜಮಾನ ಪ್ರಾರ್ಥಿಸಿಕೊಳ್ಳುತ್ತಾನೆ.

ಹೀಗೆ ಯಜಮಾನನ ಪರವಾಗಿ ವಿನಂತಿ ಮಾಡುವ ತಿಳುವಳಿಕೆಯುಳ್ಳ ವ್ಯಕ್ತಿಯೇ ಋಷಿ. ಪ್ರಧಾನವಾಗಿ ಕಾಣುವ ಇಪ್ಪತ್ತು ಮೂವತ್ತು ಋಷಿಗಳ ಜೊತೆಗೆ, ಅವರ ವಂಶದಲ್ಲಿ ಹುಟ್ಟಿದ ನಾಲ್ಕುನೂರಕ್ಕೂ ಮಿಕ್ಕ ಋಷಿಗಳು, ಋಷಿ ಕುಮಾರರು ಋಗ್ವೇದದ ಋಕ್‌ಗಳ ದ್ರಷ್ಟಾರರಾಗಿ ಕಾಣಿಸಿಕೊಳ್ಳುತ್ತಾರೆ. ಋಷಿಗಳ ಮಗ ಋಷಿಯಾಗಲೇಬೇಕು ಎಂದಾಗಲೀ, ದೇವತೆಗಳ ಮಗ ದೇವತೆಯಾಗಬೇಕು ಎಂದಾಗಲೀ ಕಠಿಣವಾದ ನಿಯಮ–ಆಗೇನೂ ಇರಲಿಲ್ಲ. ಹಾಗಾಗಿ ದೇವತೆ ಸೂರ್ಯನ ವಂಶಸ್ಥನಾದ ಚಕ್ಷುಃ ಎಂಬ ಋಷಿಯು ದೇವತಾಶಕ್ತಿಯಾದ ಸೂರ್ಯನ ಹತ್ತನೇ ಮಂಡಲದ 158ನೇ ಸೂಕ್ತದಲ್ಲಿ ಸೂರ್ಯೋಪಾಸನೆಯ ಮಾತುಗಳನ್ನು ಹಾಡುತ್ತಾನೆ. ದೇವತಾವ್ಯಕ್ತಿ ಸೂರ್ಯ ಮತ್ತು ದೇವತಾಶಕ್ತಿ ಸೂರ್ಯನ ವ್ಯತ್ಯಾಸವನ್ನು ನಾವು ಸ್ಪಷ್ಟವಾಗಿ ತಿಳಿದುಕೊಳ್ಳಬೇಕು. ಇಂದಿನ ಕಾಲದಲ್ಲೂ ನಾವು ದೇವತಾ ಸ್ವರೂಪಿಯ (ರಾಮ, ಕೃಷ್ಣ ಶ್ರೀನಿವಾಸ ಇತ್ಯಾದಿ...) ಹೆಸರುಗಳನ್ನು ನಮ್ಮ ಮಕ್ಕಳಿಗೆ ಇಡುತ್ತೇವೆ. ಆದರೆ ಅವೆ ಹೆಸರಿನ ದೇವತಾಶಕ್ತಿಗಳ ಮಾತು ಬಂದಾಗ, ನಮ್ಮ ಮನಸ್ಸಿನಲ್ಲಿ ಯಾವುದೇ ಸಂದೇಹವಿರುವುದಿಲ್ಲ.

ಈ ಸೂರ್ಯ ಸೂಕ್ತದಲ್ಲಿ ಋಷಿ ಚಕ್ಷುವು ಸೂರ್ಯನು ಪ್ರಾಣಿಗಳಿಗೆ ನೀಡುವ ಜೀವನಾಧಾರವನ್ನು ಮಾತ್ರವಲ್ಲದೆ, ಅವನು ನೀಡುವ ರಕ್ಷಣೆಯನ್ನು ನೆನಪಿಸಿಕೊಳ್ಳುತ್ತಾನೆ. ಹಾಗೆಯೇ ಪ್ರಾರ್ಥನೆಯಾಗಿ ಹೀಗೆ ಹೇಳಿಕೊಳ್ಳುತ್ತಾನೆ. 'ಸೂರ್ಯ, ನಿನ್ನ ತೇಜಸ್ಸನ್ನು ನಾವು ಕುಡಿಯುವಂತಾಗಲಿ, ಅದರಿಂದ ನಮ್ಮ ದೇಹದ ನಿತಂಶ ರಕ್ಷಣೆಯಾಗಲಿ, ನಾವು ನಿನ್ನನ್ನು ನೋಡುವಂತಾಗಲಿ ಹಾಗೂ ನಿನ್ನ ಪ್ರಕಾಶದಿಂದ ಬೆಳಗುವ ಎಲ್ಲವನ್ನೂ ನಾವು ನೋಡುತ್ತಿರುವಂತಾಗಲಿ'.

**ಸೂರ್ಯಪಾನದ ವೈಜ್ಞಾನಿಕ ಹಿನ್ನಲೆ :**

ಈಗ ಸೂರ್ಯಪಾನದ ವೈಜ್ಞಾನಿಕ ಹಿನ್ನಲೆಯನ್ನು ತಿಳಿಯಲು ಪ್ರಯತ್ನಿಸೋಣ.

ಸೂರ್ಯನಿಂದ ಸಮಸ್ತ ಕಿರಣ ತರಂಗಗಳು ಹೊರಡುತ್ತವೆ ಎಂಬುದು ನಮಗೆ ತಿಳಿದಿದೆ. ಇದನ್ನ ವಿದ್ಯುದಯಾಸ್ಕಾಂತೀಯ ತರಂಗಗಳು (Electro Magnetic Radiation) ಎಂದು ನಾವು ಕರೆಯುತ್ತೇವೆ. ವಿದ್ಯುತ್ ತರಂಗಗಳಿಂದ (Electrical) ಹಿಡಿದು ವಿಶ್ವಕಿರಣಗಳ (Cosmic rays) ವರೆಗೆ ವಿಶಾಲವಾದ ತರಂಗ ಜಾಲವನ್ನು ಸೂರ್ಯ ಬಿಡುಗಡೆ ಮಾಡುತ್ತಾನೆ. ಇಷ್ಟು ವಿಶಾಲವಾದ ತರಂಗ ಜಾಲವನ್ನು ಸೂರ್ಯ ಬಿಡುಗಡೆ ಮಾಡುತ್ತಾನೆ. ಇಷ್ಟು ವಿಶಾಲವಾದ ತರಂಗ ಮಾನದಲ್ಲಿ





(ಕೋಟಿ ಕಿಲೋಮೀಟರ್ ತರಂಗಮಾನದಿಂದ ಹಿಡಿದು ನ್ಯಾನೋ ಮೀಟರ್ ತರಂಗಮಾನದವರೆಗೆ) ನಾವು ಕಣ್ಣಿಂದ ನೋಡುವುದು ಕೇವಲ ಬೆಳಕಿನ ಚಿಕ್ಕ ತರಂಗಮಾನ. 4000 ಆಂಗ್‌ಸ್ಟ್ರಾಮ್‌ನಿಂದ(ಕೆಂಪು) ಹಿಡಿದು 8000 ಆಂಗ್‌ಸ್ಟ್ರಾಮ್ ನವರೆಗೆ (ನೇರಳೆ) ಹರಡಿರುವ ಅತ್ಯಂತ ಚಿಕ್ಕ ಬೆಳಕಿನ ತರಂಗ ಮಾನವನ್ನು ಮಾತ್ರ.

ಇದರರ್ಥ ನಮ್ಮ ದೇಹದ ಅಂಗವಾದ ಕಣ್ಣಿಗೆ ತನ್ನದೇ ಆದ ಮಿತಿಯಿದೆ. ಇದೇ ರೀತಿ ಬೇರೆ ಬೇರೆ ಇಂದ್ರಿಯಗಳಿಗೂ– ಕಿವಿ, ಚರ್ಮ, ಮೂಗು ಇತ್ಯಾದಿ–ತನ್ನದೇ ಆದ ಮಿತಿಗಳಿವೆ. 16ರಿಂದ 17 ಸಾವಿರದ ಶಬ್ದ ತರಂಗಗಳನ್ನು ಕಿವಿ ಕೇಳಬಲ್ಲದು. ಅದರ ಆಚೆ–ಈಚೆಯ ಶಬ್ದಗಳನ್ನು ಕಿವಿ ಕೇಳಲಾಗದು. ಕೆಲವು ವಾಸನೆಗಳನ್ನು ಮಾತ್ರ ಮೂಗು ಗ್ರಹಿಸಬಲ್ಲದು. ಎಲ್ಲವನ್ನಲ್ಲ, ಕೆಲವು ರುಚಿಗಳನ್ನು ನಾಲಿಗೆ ಗ್ರಹಿಸಬಲ್ಲದು, ಎಲ್ಲವನ್ನಲ್ಲ.

ಹಾಗೆಂದು ಪ್ರಕೃತಿಯಲ್ಲಿ ಇದೇ ಇತಿಮಿತಿಗಳು ಉಳಿದುಕೊಂಡಿವೆಯೇ ಎಂದರೆ, ಹಾಗೇನೂ ಇಲ್ಲ. ಮನುಷ್ಯನಿಗೆ ಹತ್ತಿರವಾದ ಪ್ರಾಣಿ ನಾಯಿ ಶಬ್ದಾತೀತ ತರಂಗಗಳನ್ನು (Ultrasonic) ಕೇಳಬಲ್ಲದು. ನಮಗೆ ಗೊತ್ತಾಗದ ಅನೇಕ ವಾಸನೆಗಳನ್ನು ಅದು ಗ್ರಹಿಸಬಲ್ಲದು. ಅಷ್ಟೇಕೆ, ತನ್ನ ಸಂಪರ್ಕಕ್ಕೆ ಬರುವ ವ್ಯಕ್ತಿ ಹೆದರಿದ್ದಾನೆಯೆ, ಕೋಪಗೊಂಡಿದ್ದಾನೆಯೆ, ಗಂಭೀರವಾಗಿದ್ದಾನೆಯೇ ಎಂಬಂತಹ ಭಾವನೆಗಳನ್ನು ಅದು ಗ್ರಹಿಸಬಲ್ಲದು.

ಪ್ರಾಣಿಸಂಕುಲದಲ್ಲಿ ಸಮಾನವಾಗಿ ಕಾಣುವ ಈ ತೆರನಾದ ಹೆಚ್ಚಾಗಿ ಕಾಣಿಸುವ ಇಂದ್ರಿಯಶಕ್ತಿ ಮನುಷ್ಯನಲ್ಲೂ ಅವನು ಪ್ರಾಣಿಯ ಹಂತದಲ್ಲಿದ್ದಾಗ ಇದ್ದಿರಬೇಕು. ಅವನು ಬುದ್ಧಿವಂತ ಪ್ರಾಣಿಯಾಗಿ ವಿಕಾಸಗೊಂಡಾಗ, ಈ ಶಕ್ತಿ ಕುಂಠಿತವಾಗಿ ಅವನು ಇಂದ್ರಿಯಗಳ ಇತಿಮಿತಿಗೆ ಸಿಕ್ಕಿಬಿದ್ದಿರಬೇಕು. ಈ ಮಾಹಿತಿಗೆ ಬೆಂಬಲವಾಗಿ ಹಿಂದೊಮ್ಮೆ ಮಾನವನ ಇಂದ್ರಿಯಗಳು ಇತಿಮಿತಿಗೆ ಒಳಗಾಗಿರಲಿಲ್ಲ ಎಂಬುದಕ್ಕೆ ವಿಜ್ಞಾನಿ ಕೆವಿನ್ ವಾರ್ವಿಕ್ ಅವರ ಪ್ರಯೋಗಗಳನ್ನು ನಾವು ಗಮನಿಸಬಹುದು.

**ವಾರ್ವಿಕ್‌ನ ಪ್ರಯೋಗಗಳು :**

ಕೆವಿನ್ ವಾರ್ವಿಕ್ ಲಂಡನ್ ಬಳಿಯಿರುವ ರೇಡಿಂಗ್ ವಿಶ್ವವಿದ್ಯಾಲಯದಲ್ಲಿರುವ ಒಬ್ಬ ಪ್ರಸಿದ್ಧ ವಿಜ್ಞಾನಿ. ಆತ ತಮ್ಮ ಜೀವನದ ಮಹತ್ವದ ಪ್ರಯೋಗವನ್ನು 'I' Cyberg ಎಂಬ ಕೃತಿಯಲ್ಲಿ ದಾಖಲಿಸಿದ್ದಾನೆ. ಮನುಷ್ಯನಿಗಿಂತ ಕಂಪ್ಯೂಟರ್ ಹೆಚ್ಚು ಬುದ್ಧಿವಂತ ಎಂಬ ಪೂರ್ವಾಗ್ರಹದಿಂದಲೇ ತಮ್ಮ ಪ್ರಯೋಗಗಳನ್ನು ಆರಂಭಿಸುವ ವಾರ್ವಿಕ್, ತಮ್ಮ ದೇಹದ ನರಸಮೂಹಕ್ಕೆ ಎಲೆಕ್ಟ್ರಾನಿಕ್ ಸರ್ಕ್ಯೂಟ್ ಅನ್ನು ಅಳವಡಿಸಿ, ತನ್ಮೂಲಕ ರೋಬೋಟ್‌ನಂತಹ ಯಾಂತ್ರಿಕ ಸಾಧನೆಗಳನ್ನು ಚಲಾಯಿಸುತ್ತಾರೆ. ತಮ್ಮ ಕೈ ಆಡಿಸಿದಾಗ ರೋಬೋಟ್ ಸಹ ಕೈ ಆಡಿಸುವುದರಿಂದ ಹಿಡಿದು, ತಾವು ಆಲೋಚಿಸಿದಾಗ ತಮ್ಮಂತೆಯೇ ನರಸಮೂಹಕ್ಕೆ ಎಲೆಕ್ಟ್ರಾನಿಕ್ ಸರ್ಕ್ಯೂಟನ್ನು ಅಳವಡಿಸಿದ್ದ ತಮ್ಮ ಪತ್ನಿ ತಮ್ಮಂತೆಯೇ ಆಲೋಚಿಸಿಸುವವರೆಗೂ ಪ್ರಯೋಗಗಳನ್ನು ನಡೆಸುತ್ತಾರೆ.

ಈ ಪ್ರಯೋಗಗಳ ಪೈಕಿ ಒಂದು ಮುಖ್ಯವಾದ ಪ್ರಯೋಗ, ಶಬ್ದಾತೀತ ತರಂಗಗಳಿಗೆ ಸಂಬಂಧಿಸಿದ್ದು. ತಮ್ಮ ಕಣ್ಣುಗಳನ್ನು ಕಟ್ಟಿಕೊಂಡು ತಮ್ಮ ಎದುರಿಗೆ ಚಲಿಸುವ ಗೋಡೆಯ ಮಾದರಿಯನ್ನು ಆತ ಇಟ್ಟುಕೊಳ್ಳುತ್ತಾನೆ. ಶಬ್ದಾತೀತ ತರಂಗಗಳನ್ನು ಆತ ಈ ಗೋಡೆಯ ಮೇಲೆ ಬೀಳುವಂತೆ ಮಾಡಿದಾಗ, ಅದು ಪ್ರತಿಫಲಿತವಾಗಿ ಕೈಗೆ ತಗುಲಿಸಲಾದ ಅಂಟೆನಾ ಬಳಿ ಬಂದು ಇವರ ನರ ಸಮೂಹಗಳನ್ನು ತಲುಪುತ್ತದೆ. ಆಶ್ಚರ್ಯ! ಅವರಿಗೆ ಈ ಶಬ್ದಾತೀತ ತರಂಗಗಳ ಅನುಭವವಾಗುತ್ತದೆ. ಗೋಡೆಯನ್ನು ಹಿಂದೆ ಮುಂದೆ ಮಾಡಿದಾಗ ಅವರ ಅನುಭವ ಅವರಿಗಾಗುತ್ತದೆ. ನಮ್ಮ ಬಾಹ್ಯ ಕಿವಿಗಳು ಶಬ್ದಾತೀತ ತರಂಗಗಳನ್ನು ಕೇಳುವ ಶಕ್ತಿಯನ್ನು ಕಳೆದುಕೊಂಡಿಲ್ಲ ಎಂಬ ಮಾತು ಈ ಪ್ರಯೋಗದಿಂದ ಸಾಬೀತಾಗುತ್ತದೆ. ಆದರೆ ವಾರ್ವಿಕ್ ಈ ಪ್ರಯೋಗದ ಅಂತರಾರ್ಥವನ್ನು ಬೇರೆಯದಾಗಿ ಗ್ರಹಿಸುತ್ತಾರೆ. ಅವರ ದೃಷ್ಟಿಯಲ್ಲಿ ಮನುಷ್ಯನ ಮೆದುಳು ಕಂಪ್ಯೂಟರ್‌ನಷ್ಟು ಶಕ್ತಿವಂತನಲ್ಲ. ಹಾಗಾಗಿ ಶಬ್ದಾತೀತ ತರಂಗಗಳನ್ನು ಕೇಳಿಸಿಕೊಂಡಿದ್ದು ಎಲೆಕ್ಟ್ರಾನಿಕ್ ಸರ್ಕ್ಯೂಟ್ ಎಂಬ ನಿರ್ಧಾರಕ್ಕೆ ಅವರು ಬರುತ್ತಾರೆ.

ಆದರೆ ಮನುಷ್ಯನ ದೇಹ, ಮೆದುಳು ತಾನು ಪ್ರಾಣಿಯಾಗಿದ್ದಾಗ ನಡೆದಿದ್ದ ಜ್ಞಾನವನ್ನು, ಶಕ್ತಿಯನ್ನು ಈಗಲೂ ಪಳಿಯುಳಿಕೆಯ ರೂಪದಲ್ಲಿ ಉಳಿಸಿಕೊಂಡಿದೆ ಎಂಬುದೇ ಸತ್ಯ. ಅದನ್ನು ಮತ್ತೆ ಪ್ರಚೋದಿಸಿದರೆ, ಈ ಶಕ್ತಿ ಮತ್ತೆ ನಮಗೆ ಹಿಂದಿರುಗಿ ಬರುವ ಸಾಧ್ಯತೆ ಬಹಳವಿದೆ. ಸೂರ್ಯಪಾನದ ವಿಷಯದಲ್ಲೂ ಈ ಮಾತು ಸತ್ಯ ಎಂದು ಸಾಬೀತಾಗಿದೆ.

–ಮುಂದುವರೆಯುತ್ತದೆ.

# ವಚನ ಸಂಪದ (ಅಲ್ಲಮಪ್ರಭು ವಚನಗಳ ವಿಶ್ಲೇಷಣೆ)

–ಡಾ॥ ರಾಜಶೇಖರ ಜಮದಂಡಿ, ಜೆ.ಎಸ್.ಎಸ್.ಮಹಿಳಾ ಕಾಲೇಜು, ಸ್ನಾತಕೋತ್ತರ ವಿಭಾಗ, ಚಾಮರಾಜನಗರ–೫೭೧೩೧೩.

**ಈ**ಗಾಗಲೇ ವಿವಿಧ ರೀತಿಯ ವಸ್ತು, ವೈಚಾರಿಕತೆ, ಚಿಂತನೆ, ಪ್ರವಾಸ ಸಾಹಿತ್ಯ ಮುಂತಾದ ಒಂಭತ್ತು ಪುಸ್ತಕಗಳನ್ನು ಲೋಕಾರ್ಪಣೆ ಮಾಡಿರುವ ಶ್ರೀ ಜಯದೇವಪ್ಪ ಜೈನಕೇರಿಯವರು ಈಗ 'ವಚನ ಸಂಪದ' ಎಂಬ ಪುಸ್ತಕ ಹೊರತಂದಿದ್ದಾರೆ. ಈಗಾಗಲೇ ಸಾಹಿತ್ಯ, ಸಂಶೋಧನೆ ಕ್ಷೇತ್ರದಲ್ಲಿ ನಾಡಿಗೆ ಚಿರಪರಿಚಿತರಾಗಿರುವ ಅವರು ತಮ್ಮೊಳಗೆ ಅನುಭವಕ್ಕೆ ಬಂದಂತಹ ಅಲ್ಲಮನ ಜೀವನ, ವ್ಯಕ್ತಿತ್ವ ಹಾಗೂ ವಚನಗಳಿಗೆ ಸಂಬಂಧಿಸಿದವುಗಳನ್ನು ಅತ್ಯಂತ ಮಾರ್ಮಿಕವಾಗಿ ಈ ಪುಸ್ತಕದಲ್ಲಿ ವಿಶ್ಲೇಷಿಸಿದ್ದಾರೆ.

೧೨ನೇ ಶತಮಾನದಲ್ಲಿದ್ದ ಅಲ್ಲಮಪ್ರಭು ಮಾಯೆಯನ್ನು ಗೆದ್ದ ಧೀರ. ಲೋಕ ಸಂಚಾರಿಯಾಗಿ ಲೋಕಾನುಭವದೊಂದಿಗೆ ಜೀವನಾನುಭವ ಪಡೆದು ಕೊನೆಗೆ ಬಸವಣ್ಣನವರು ಕಟ್ಟಿದ್ದ ಅನುಭವ ಮಂಟಪದ ಶೂನ್ಯಪೀಠಾಧ್ಯಕ್ಷನಾಗುವನು. ಅನುಭಾವದೆತ್ತರಕ್ಕೇರಿದ ಅಲ್ಲಮನ ವಿಚಾರಗಳನ್ನು ಪ್ರಭುಲಿಂಗಲೀಲೆಯಲ್ಲಿ ಚಾಮರಸ ಕವಿಯು 'ಸತ್ತವರ ಕಥೆಯಲ್ಲ ಜನನದ ಕುತ್ತದಲ್ಲಿ ಕುದಿಕುದಿದು ಕರ್ಮದ ಕತ್ತಲೆಗೆ ಸಿಲುಕಿದವರ ಸೀಮೆಯ ಹೊಲಬು ತಾನಲ್ಲ... ಸತ್ಯ ಶರಣರು ತಿಳಿವುದೀ ಪ್ರಭುಲಿಂಗಲೀಲೆಯನು' ಎಂದು ಹೇಳಿರುವುದನ್ನು ಸಂದರ್ಭಾನುಸಾರವಾಗಿ ಪುಸ್ತಕದಲ್ಲಿ ಬಳಸಿಕೊಳ್ಳಲಾಗಿದೆ.

ಆಧ್ಯಾತ್ಮ ಚಿಂತನೆಯ ವ್ಯಕ್ತಿತ್ವವುಳ್ಳ ಅಲ್ಲಮ ತನ್ನ ಪರಿಧಿಯೊಳಗೆ ಬಂದ ಎಲ್ಲ ಶರಣರನ್ನು ಅನುಭಾವದೆತ್ತರಕ್ಕೇರಲು ಸಹಕರಿಸಿದವನು. ಜ್ಞಾನದ ಸಂಪತ್ತನ್ನು ಎಲ್ಲರಿಗೂ ಉಣಿಸಿ ಪರೀಕ್ಷಿಸಿದವನು. 'ಬಿರುಗಾಳಿ ಬೀಸಿ ಮರನ ಮುರಿಯುವಂತಹ ಸುಳುಹು ಸುಳಿಯದೇ ತಂಗಾಳಿ ಪರಿಮಳದೊಡಗೂಡಿ ಸುಳಿದಿದ್ದಾನೆ' ಎಂಬ ವಚನವನ್ನು 'ತಂಗಾಳಿಯಾಗಿ ಸುಳಿವ ಪರಿ' ಎಂಬ ಶೀರ್ಷಿಕೆಯಲ್ಲಿ ಲೇಖಕರು ವಿವರಿಸಿದ್ದಾರೆ. ಹೀಗೆ ಅಲ್ಲಮನ ವಚನಗಳಲ್ಲಿರುವ ಮಹತ್ವದ ವಿಷಯಗಳನ್ನೇ ಶೀರ್ಷಿಕೆಗಳವಡಿಸಿ ಚಿಕ್ಕ ಚಿಕ್ಕ ವಾಕ್ಯಗಳಲ್ಲಿ ಸರಳ ಭಾಷೆಯಲ್ಲಿ ಅರ್ಥೈಸಿದ್ದಾರೆ. ಉದಾಹರಣೆಗೆ; ಎತ್ತಣಿಂದೆತ್ತ ಸಂಬಂಧವಯ್ಯ, ಮಾತೆಂಬುದು ಜ್ಯೋತಿ ರ್ಲಿಂಗ, ಭ್ರಾಂತಿಯ ಬೇರು, ಆಶನವ ತೊರೆದಾತ, ನೆಲದ ಮರೆಯ ನಿಧಾನ, ಉರಿವ ಕೆಂಡದ ಮೇಲೆ ಮುಂತಾದವು...

ಇಲ್ಲಿ ಅಲ್ಲಮಪ್ರಭುವಿನ ಬದುಕನ್ನು ಕಟ್ಟಿಕೊಡುತ್ತಾ, ಸಮಕಾಲೀನ ಶರಣರ ಜೀವನ ವೈಚಿತ್ರ ಹಾಗೂ ಅಂದಿನ ಸಮಾಜದಲ್ಲಿದ್ದ ಕಂದಾಚಾರ, ಶೋಷಣೆ, ವರ್ಗಭೇದ, ವರ್ಣಭೇದಗಳ ಬಗೆಗೆ ಅಷ್ಟೇ ಸೂಕ್ಷ್ಮವಾಗಿ ಲೇಖಕರು ಗಮನಿಸಿದ್ದಾರೆ. ಅಲ್ಲಮನು ವಾಸ್ತವದಿಂದ ಅತೀತಕ್ಕೆ ಮೂರ್ತದಿಂದ ಅಮೂರ್ತಕ್ಕೆ ಆತ್ಮಸಾಕ್ಷಾತ್ಕಾರಕ್ಕಾಗಿ ಸರ್ವವ್ಯಾಪಕವಾದ ಜ್ಞಾನ ಸಂಪಾದಿಸಿದ, ಲೀಲಾ ಸ್ವರೂಪನಾದ ವೈರಾಗ್ಯ ಶಿಖರದ ಉಪಮಾತೀತನು. ಈತನ ವಚನಗಳನ್ನು ಓದಿಕೊಂಡು ಆ ಬಗೆಗೆ ಮಾತಾಡಿ ಜನ ಮೆಚ್ಚುಗೆ ಪಡೆಯುವವರು ಮೊದಲ ಗುಂಪಿನವರಾದರೆ ವಚನಗಳ ಓದಿನ ಜೊತೆಗೆ ಅವುಗಳನ್ನು ತಮ್ಮದೇ ಶೈಲಿ, ಭಾಷೆ, ಅರ್ಥ, ಉಪಮೆಗಳ ಮೂಲಕ ವಿವರಿಸಿ ವಾಸ್ತವಿಕತೆಗೆ ಸಮೀಕರಿಸಿ ಪುಸ್ತಕ ರೂಪದಲ್ಲಿ ಪ್ರಕಟಿಸುವವರು ಎರಡನೇ ಗುಂಪಿನವರು. ಈ ಎರಡನೇ ಗುಂಪಿಗೆ ಸೇರುವ ಜಯದೇವಪ್ಪನವರು ಸದಾ ಅಧ್ಯಯನ, ಬರವಣಿಗೆಯನ್ನೇ ಪ್ರೀತಿಸುತ್ತಾ ಬಂದಿದ್ದಾರೆ. ಈ ಭಾನುವಾರ, ಸುಮ ಸೌರಭದಂತಹ ಪತ್ರಿಕೆಗಳಿಗೆ ಆಗಾಗ ಅಲ್ಲಮನ ಅಂಕಣವನ್ನು ಬರೆದ ಬಿಡಿ ಬರಹಗಳನ್ನು ಈಗ ವಚನ ಸಂಪದದಲ್ಲಿ ಸಂಗ್ರಹಿಸಿದ್ದಾರೆ.

ಅಲ್ಲಮನ ಬದುಕಾಗಲಿ, ವಚನಗಳಾಗಲಿ ಮತ್ತು ಸಮಕಾಲೀನ ಶರಣರ ಜೀವನ ವೈವಿಧ್ಯ ಅರ್ಥೈಸಿಕೊಳ್ಳುವುದು ಒಂದು ಹಂತಕ್ಕೆ ನಿಲುಕಲಾರದು. ಅಲ್ಲಮನ ವಚನಗಳ ಬೆಡಗಿನ ವಚನಗಳಲ್ಲದೆ ದೇಶಕಾಲವನ್ನು ಮೀರಿರುವಂತವು. ಸುಲಭವಾಗಿ ಅರ್ಥೈಸುವ ನಿಟ್ಟಿನಲ್ಲಿ ಜಯದೇವಪ್ಪನವರು ಅಲ್ಲಮನ ಕೆಲವು, ವಚನಗಳನ್ನು ಇಲ್ಲಿ ಸಂಕ್ಷಿಪ್ತವಾಗಿ ವಿವರಿಸಲು ಪ್ರಯತ್ನಿಸಿದ್ದಾರೆ. ಅವರ ಈ ಪ್ರಯತ್ನವನ್ನು ಎಂದಿನಂತೆ ಸಹೃದಯರು ಸ್ವಾಗತಿಸುತ್ತಾರೆಂದು ನಂಬಿಕೆ ನನಗಿದೆ.

ವರ್ಣ ವೈವಿಧ್ಯವನ್ನೊಳಗೊಂಡ ಮುಖಪುಟವು ಬಸವಣ್ಣ, ಅಂಗದ ಮೇಲಿರುವ ಲಿಂಗ ಹಾಗೂ ಬೆಳಗುವ ಜ್ಯೋತಿ ಸ್ವರೂಪದ ಚಿತ್ರ ಆಕರ್ಷಕವಾಗಿವೆ. ಒಟ್ಟಾರೆ ಅಲ್ಲಮನ ಅನುಭಾವ ಓದುಗರಿಗೆ ಪ್ರಭಾವ ಬೀರುವ ನಿಟ್ಟಿನಲ್ಲಿ ಹಾಗೂ ವಚನಗಳ ಅರ್ಥ ವಿವರಿಸುವ ಪುಸ್ತಕಗಳ ಸಾಲಿನಲ್ಲಿ ಜಯದೇವಪ್ಪನವರ ಈ ಪುಸ್ತಕವೂ ಸಹ ಮಹತ್ವಪೂರ್ಣವಾಗಿ ಸೇರ್ಪಡೆಯಾಗಿದೆ. ಇದೇ ವರ್ಷ ಇವರ ಈ ಪುಸ್ತಕಕ್ಕೆ ಇಳಕಲ್ ಮಹಾಂತಪೀಠದ ವತಿಯಿಂದ ಪ್ರಶಸ್ತಿಯೂ ದೊರಕಿರುವುದು ಹೆಮ್ಮೆಯ ವಿಷಯವಾಗಿದೆ. □





# ಏನಿದು? ಕೇರಳದ ಕೆಂಪು ಕುಡಿಯುವ ನೀರು?

–ಡಾ॥ ಶ್ರೀಶೈಲ ಮ ಬದಾಮಿ, ಪ್ರಾಂಶುಪಾಲರು & ನಿರ್ದೇಶಕರು, ಶ್ರೀ ಸಿದ್ಧಗಂಗಾ ಫಾರ್ಮಸಿ ಕಾಲೇಜು, ತುಮಕೂರು.

**ಕೇ**ರಳದ ಕೊಟ್ಟಾಯಮ್‌ನ ಮಹಾತ್ಮಾಗಾಂಧಿ ವಿಶ್ವವಿದ್ಯಾಲಯದಕ್ಕೆ ಪರೀಕ್ಷಕನಾಗಿ ಭೇಟಿ ಕೊಟ್ಟಾಗ ಅಲ್ಲಿ ಕುಡಿಯಲು ಕೊಟ್ಟ ನೀರು ಕೆಂಪು ಬಣ್ಣದ್ದಾಗಿತ್ತು! ಕೇರಳದ ವಿವಿಧ ಭಾಗಗಳಲ್ಲಿ ಪ್ರತಿಯೊಂದು ಮನೆ, ಹೋಟೆಲ್, ಆಸ್ಪತ್ರೆ ಹೀಗೆ ಎಲ್ಲೆಲ್ಲಿಯೂ ಇದೇ ತರಹದ ನೀರನ್ನು ಕುಡಿಯಲು ಕೊಡಲಾಗುತ್ತದೆ. ಅಯ್ಯಪ್ಪನ ದರ್ಶನಕ್ಕೆ ಶಬರಿಮಲೆಗೆ ಹೋಗುವ ಭಕ್ತರಿಗೆ ಈ ಅನುಭವ ಸರ್ವೇ ಸಾಮಾನ್ಯ. ಈ ನೀರಿನ ಉಪಯೋಗ ದಾಹವನ್ನು ಕಡಿಮೆ ಗೊಳಿಸುತ್ತದೆ. ಚರ್ಮಕ್ಕೆ ಹೊಳಪು ನೀಡುತ್ತದೆ, ಸಕ್ಕರೆ ಕಾಯಿಲೆಯನ್ನೂ ನಿಯಂತ್ರಿಸುತ್ತದೆ. ಹೀಗೆ ಹಲವಾರು ಉಪಯುಕ್ತ ಔಷಧೀಯ ಗುಣಗಳನ್ನು ಹೊಂದಿದೆ. ತಲೆ– ತಲಾಂತರಗಳಿಂದ ಇದೇ ನೀರನ್ನು ಇಲ್ಲಿ ಬಳಸಲಾಗುತ್ತದೆ ಎಂಬ ಅಭಿಪ್ರಾಯ ಅಲ್ಲಿ ದೊರೆಯಿತು. ಕುಡಿಯುವ ನೀರಿಗೆ 'ಪದಿಮುಗಮ್' ಅಥವಾ 'ಸಪ್ಪಂಗಮ್' ಎಂಬ ಮರದ ಕಾಂಡದ ಚಿಕ್ಕ ತುಣುಕೊಂದನ್ನು ಹಾಕಿ ಕುದಿಸಿದಾಗ ನೀರಿಗೆ 'ಕೆಂಪು' ಬಣ್ಣ ಬರುತ್ತದೆ. ಅಲ್ಲಿನ ಕಿರಾಣಿ ಅಂಗಡಿಗಳಲ್ಲಿ 'ಸಿದ್ಧ ಔಷದಿ–ಪದಿಮುಗಮ್' ಎಂಬ ತಲೆಬರಹದೊಂದಿದೆ ಪ್ರತಿ 25 ಗ್ರಾಂಗೆ ಹತ್ತು ರೂಪಾಯಿ ಬೆಲೆಗೆ ಮಾರಾಟವಾಗು ತ್ತಿದ್ದು ಇದು, ಹೋಲ್‌ಸೇಲ್‌ನಲ್ಲಿ ಮೂರು ವರ್ಷಗಳ ಹಿಂದೆ ಒಂದು ಕಿಲೋ ಗ್ರಾಂಗೆ ಐವತ್ತು ರೂಪಾಯಿಯಂತೆ ದೊರೆಯುತ್ತಿತ್ತು. ನನ್ನ ಕಾಲೇಜಿನ ಪ್ರಯೋಗಾಲಯಗಳಲ್ಲಿ ಇದರ ಔಷದೀಯ ಗುಣಗಳನ್ನು ಪರೀಕ್ಷಿಸಿ ಸಿದ್ಧಪಡಿಸಲು ಒಂದು ಕಿಲೋಗ್ರಾಂ 'ಪದಿಮುಗಮ್' ಕೊಂಡು, ಊಟಿಗೆ ಬಂದು ನನ್ನ ಅಧೀನದಲ್ಲಿ ಸಂಶೋಧನೆಗೆ ಸೇರಿದ್ದ ಕೇರಳದ ವಿದ್ಯಾರ್ಥಿ ಸುಧೀರ ಮುರ್ಕೋಟ್‌ಗೆ ನೀಡು, 'ಪದಿಮುಗಮ್' ಕುರಿತಾದ ಈವರೆಗಿನ ಸಂಶೋಧನೆಗಳನ್ನು ವೈದ್ಯಕೀಯ ವಿವರಗಳನ್ನು ಕಲೆಹಾಕಲು ಆದೇಶಿಸಿದೆ.

ಹೀಗೆ ಪ್ರಾರಂಭವಾದ 'ಪದಿಮುಗಮ್' ಕುರಿತಾದ ನನ್ನ ಸಂಶೋಧನಾತ್ಮಕ ಬುದ್ಧಿ, ಈ ಮರದ ಅಪೂರ್ವ ಔಷಧೀಯ ಗುಣಗಳ ಖಜಾನೆಯನ್ನೇ ನನ್ನೆದುರಿಗೆ ತೆಗೆದಿರಿಸಿತು. ಕೇರಳದ ಈ ಕುಡಿಯುವ 'ಕೆಂಪು ನೀರು' ಬರೀ ಬಣ್ಣದ ನೀರಾಗಿರದೆ, ನಮ್ಮ ದೇಹದಲ್ಲಿ ಸಂರಕ್ಷಿಸುವ, 'ಅಮೌಲ್ಯ, ಅತ್ಯದ್ಭುತ ಔಷಧೀಯ ನೀರು' ಎಂಬ ಸತ್ಯ ಅರಿವಾಯಿತು. ನಮ್ಮ ಪೂರ್ವಜರು ತಮ್ಮ ಮುಂದಿನ ಪೀಳಿಗೆಗಳ ರಕ್ಷಣೆಗಾಗಿ ಬೆಳೆಸಿದ ಇಂಥ ಪರಂಪರೆಗಳು ನಿಜಕ್ಕೂ ವೈಜ್ಞಾನಿಕ! ನಂತರ 'ಪದಿಮುಗಮ್'ನ ಬಲಕೆ ಪ್ರಚಾರ ಆರಂಭಿಸಿದೆ.

ಕಳೆದ ವರ್ಷ ಮತ್ತೆ ಕೊಟ್ಟಾಯಮ್‌ಗೆ ಹೋದಾಗ 'ಪದಿಮುಗಮ್'ನ ಬೆಲೆ ಕಿಲೋ ಗ್ರಾಂ ಒಂದಕ್ಕೆ ಹೋಲ್ ಸೆಲ್‌ನಲ್ಲಿ 400 ರೂಗಳಿಗೆ ಜಿಗಿದಿತ್ತು! ಕೇರಳದ ಜಗತ್ಪ್ರಸಿದ್ಧ ಆಯುರ್ವೇದ ಔಷಧಾಲಯವಾದ 'ಕೋಟಕಲ್ ಆರ್ಯ ವೈದ್ಯ ಶಾಲಾ'ದ ವಯೋವೃದ್ಧ ವಿಜ್ಞಾನಿ ಡಾ॥ ವಿ.ಪಿ.ಕೆ. ನಂಬಿಯಾರ್ (ಈಗ ದಿವಂಗತ) ನನ್ನೊಂದಿಗೆ ಹೀಗೆ ಹೇಳಿದ್ದರು, 'ನಮ್ಮಲ್ಲಿಗೆ ಭೇಟಿ ಕೊಡುವ ಎಲ್ಲರಿಗೂ ನಾನು ಮೂರು ರೀತಿಯ ಮರಗಳನ್ನು ಬೆಳೆಸಲು ತಿಳಿಸುತ್ತೇವೆ. ಬನ್ನಿ ತೋರಿಸುತ್ತೇನೆ. ಈ ಮರಗಳು ಈಗ ಅಳಿವಿನ ಅಂಚಿನಲ್ಲಿದೆ, ಸಂರಕ್ಷಿಸಲೇಬೇಕಿದೆ. ಇನ್ನು ಪದಿಮುಗಮ್ ಈಗ ಭಾರೀ ಬೇಡಿಕೆ. ಅದರ ಬೀಜಗಳಿಗೂ ಈಗ ಕಿಲೋಗ್ರಾಂ ಒಂದಕ್ಕೆ 200 ರೂ. ಅದೂ ಸಿಗುತ್ತಿಲ್ಲ. ಭಾರತದಿಂದ ಅಮೇರಿಕ ಸೇರಿದಂತೆ ಇತರ ದೇಶಗಳಿಗೆ ಅದು ಈಗ ಹೆಚ್ಚಾಗಿ ರಫ್ತಾಗುತ್ತಿದೆ. ಜಮೀನು ಇದ್ದವರು ಬೇಲಿಯ ಗುಂಟ ಇದನ್ನು ಬೆಳೆಸಿದರೂ ಸಾಕಷ್ಟು ಆದಾಯವನ್ನು ಇದು ಕೊಡುತ್ತದೆ. ಮನೆಯ ಬಳಕೆಗೂ ಆಗಿ, ಬಳಸಿದವರ ಆರೋಗ್ಯ ಸಂರಕ್ಷಿಸುತ್ತದೆ. ಈ ಮೂರು ಮರಗಳ ಮತ್ತು ಇತರ ಔಷಧೀಯ ಸಸ್ಯಗಳ ಸಸಿಗಳು ನಮ್ಮಲ್ಲಿ ದೊರೆಯುತ್ತವೆ. ಜೊತೆಗಿದ್ದ ಕೇರಳ ಮೂಲದ ನನ್ನ ಹಿರಿಯ ಸಹೋದ್ಯೋಗಿ ಡಾ॥ ಪಿ.ವಿಜಯನ್ ತಮ್ಮ ಅಳಿಯ ಹೆಚ್ಚಿನ ಪ್ರಮಾಣದಲ್ಲಿ 'ಪದಿಮುಗಮ್' ಬೆಳೆಯುತ್ತಿರುವ ಕುರಿತು ತಿಳಿಸಿದರು. ಕೇರಳದ ಪತ್ರಿಕೆಗಳಲ್ಲಿ 'ಪದಿಮುಗಮ್ ಬೆಳೆಸಿ ಹಣ ಗಳಿಸಿ' ಎಂಬ ತಲೆಬರಹ ಹೊತ್ತ ಜಾಹಿರಾತುಗಳು ಸರ್ವೇ ಸಾಮಾನ್ಯವಾಗಿರುವುದು. ಅದರ ಹೆಚ್ಚಿದ ಬೇಡಿಕೆಗೆ ಸಾಕ್ಷಿಯಾಗಿದೆ. ಈ ಬೇಡಿಕೆಗಳಿಗೆ ಕಾರಣಗಳೇನು? ಕೇರಳಾದ್ಯಾಂತ ದೇಶದ ಇತರ ಭಾಗಗಳಲ್ಲಿ ಇದನ್ನು ಬಳಸುವ, ಬೆಳೆಸುವ ಅವಶ್ಯಕತೆ ಇದೆಯೇ ಲೇಖನ ಓದಿ.

## ಏನಿದು ಪದಿಮುಗಮ್ ?

ಕೇರಳದ ಪದಿಮುಗಮ್‌ಗೆ ಇಂಗ್ಲೀಷ್‌ನಲ್ಲಿ 'ಸಪ್ಪಾನ್ ವುಡ್' ಅಥವಾ 'ಈಸ್ಟ್ ಇಂಡಿಯಾ ರೆಡ್‌ವುಡ್' ಎಂದು ಕರೆಯುತ್ತಾರೆ. ಮಲೆನಾಡಿನ ಭಾಗಗಳಲ್ಲಿ ಇದನ್ನು 'ನುತ್ತರ ಗಂಜಿ' ಎನ್ನುತ್ತಾರೆ. ಇದರ ಸಸ್ಯಶಾಸ್ತ್ರೀಯ ಹೆಸರು ಸಿಸಾಲ್ಪಿನಿಯಾ ಸಪ್ಪಾನ್. ಇದು ಲೆಗುಮಿನೋಸಿಯ ಎಂಬ ಗುಂಪಿಗೆ ಸೇರಿದೆ. ಇದು ನಿಸರ್ಗದತ್ತವಾದ ಬಣ್ಣವನ್ನು ಹೊಂದಿರುವ ಸಸ್ಯ. ಭಾರತದಲ್ಲಿ ಇದನ್ನು ತಮಿಳುನಾಡು,

ಕೇರಳ, ಕರ್ನಾಟಕ, ಆಂಧ್ರಪ್ರದೇಶ ಮತ್ತು ಪಶ್ಚಿಮ ಬಂಗಾಳಗಳ ತೋಟಗಳು ಮತ್ತು ನರ್ಸರಿಗಳಲ್ಲಿ ಬೇಲಿಯ ಗಿಡವಾಗಿ ಬೆಳೆಸಲಾಗುತ್ತದೆ. ಇದು ಮುಳ್ಳುಗಳನ್ನು ಹೊಂದಿರುವ ವಿಶಾಲವಾಗಿ ಬೆಳೆಯುವ ಮರ. ಹತ್ತು ಮೀಟರ್ ಎತ್ತರ ಮತ್ತು 15ರಿಂದ 20 ಸೆಂ.ಮೀ. ಅಗಲವನ್ನು ಇದು ಹೊಂದುತ್ತದೆ. ಪ್ರತಿಯೊಂದು ಕಾಯಿಯಲ್ಲಿ 3 ರಿಂದ 4 ಕಂದುಬಣ್ಣದ ಬೀಜಗಳಿರುತ್ತವೆ. ಬೀಜಗಳಿಂದಲೇ ಈ ಮರದ ಪುನರುತ್ಪತ್ತಿ ಇದು ಅತ್ಯಂತ ವೇಗವಾಗಿ ಬೆಳೆಯುವ ಮರ. ಬೀಜಗಳು 3 ತಿಂಗಳಿನವರೆಗೆ ಸಸಿಯಾಗಿ ಬೆಳೆಯುವ ಸಾಮರ್ಥ್ಯ ಹೊಂದಿರುತ್ತದೆ. ಬೀಜಗಳನ್ನು 50ರಿಂದ 60 ಡಿಗ್ರಿ ಸೆಂಟಿಗ್ರೇಡ್ ಉಷ್ಣಾಂಶದ ಬಿಸಿನೀರಿನಲ್ಲಿ 10 ನಿಮಿಷಗಳವರೆಗೆ ನೆನೆಸಿ, ನೆಟ್ಟಲ್ಲಿ, ಸುಲಭವಾಗಿ ಸಸಿಗಳಾಗಿ ಬೆಳೆಯುತ್ತವೆ. ಒಂದು ವರ್ಷದ ಅವಧಿಯಲ್ಲಿ ಇದು 3ರಿಂದ 5 ಮೀಟರ್ ಎತ್ತರವನ್ನು ತಲುಪುತ್ತದೆ. ಪ್ರತಿವರ್ಷ ಏಪ್ರಿಲ್‌ನಿಂದ ಡಿಸೆಂಬರ್‌ರವರೆಗೆ ಇದು ಹೂ ಬಿಡುತ್ತದೆ. ಹೂಗಳು ಕಾಯಿಗಳಾಗಿ 5ರಿಂದ 15 ದಿನಗಳು ಮಾರ್ಪಾಡು ಹೊಂದುತ್ತವೆ. ಈ ಕಾಯಿಗಳು ಪೂರ್ತಿಯಾಗಿ ಬೆಳೆಯಲು 3ತಿಂಗಳ ಅವಧಿ ಬೇಕು. ಆದರೆ ಕೆಲವು ಬೀಜಗಳು ಮಾತ್ರ ಪೂರ್ಣ ಬೆಳವಣಿಗೆಯನ್ನು ಹೊಂದುತ್ತವೆ. ಇದನ್ನು ತೋಟಗಾರಿಕೆಯ ಗಿಡವಾಗಿ ದೊಡ್ಡದಾದ ಎಲೆಗಳು ಮತ್ತು ಪ್ರಕಾಶಮಾನವಾದ ಹಳದಿ ಹೂಗಳಿಗಾಗಿ ಬೆಳೆಸಲಾಗುತ್ತದೆ. ಒಂದರೊಳಗೊಂದು ಕೂಡಿಕೊಂಡು ಜೋಡಣೆಯಾದ ಈ ಗಿಡದ ಭಾಗಗಳು ಉತ್ತಮ ಶಕ್ತಿಯನ್ನು ಹೊಂದಿದ್ದು, ಭದ್ರವಾದ ಬೇಲಿಯು ಗಿಡವಾಗಿ ಇದನ್ನು ಉಪಯೋಗಿಸಲು ಕಾರಣವಾಗಿದೆ. ಎಲ್ಲಾ ತರಹದ ಮಣ್ಣಿನಲ್ಲಿ ಬೆಳೆಯುವ ಶಕ್ತಿಯನ್ನು ಇದು ಹೊಂದಿದ್ದು, ಕೆಂಪು ಮಣ್ಣು ಉತ್ತಮವಾಗಿ ಬೆಳೆಯಲು ಸಹಕಾರಿಯಾಗಿದೆ. ಎಂತಹ ಬರಗಾಲವನ್ನಾದರೂ ತಡೆದುಕೊಳ್ಳುವ ಸಾಮರ್ಥ್ಯವನ್ನು ಹೊಂದಿರುವ ಇದು ತನ್ನ ಎಲೆಗಳನ್ನು ವರ್ಷದಲ್ಲಿ ಕೇವಲ 10 ರಿಂದ 15ದಿನಗಳು ಮಾತ್ರ ಉದುರಿಸುತ್ತದೆ. ನೆಟ್ಟ 6ರಿಂದ 8 ವರ್ಷಗಳ ಬಳಿಕ ಸಿಪ್ಪೆ ತೆಗೆದು ಇಡೀ ಮರದ ಕಾಂಡವನ್ನು ಬಳಕೆ ಅಥವಾ ಮಾರಾಟ ಮಾಡಲಾಗುತ್ತದೆ.

**ಜಗತ್ಪ್ರಸಿದ್ಧ ಬಣ್ಣ :**

ಈ ಮರದ ಅತ್ಯಂತ ಪ್ರಮುಖವಾದ ಭಾಗವೆಂದರೆ ಕಾಂಡ. ಅದನ್ನು ಸಣ್ಣ ಸಣ್ಣ ಭಾಗಗಳಾಗಿ ತುಂಡು ಮಾಡಿ ನೀರಿನಲ್ಲಿ ಕುದಿಸುವುದರಿಂದ ಅದರಲ್ಲಿನ ಬಣ್ಣವನ್ನು ಹೊರ ತೆಗೆಯಬಹುದಾಗಿದೆ. ಬಣ್ಣ ಪೂರ್ತಿಯಾಗಿ ಹೊರಬಂದಿರುವುದನ್ನು ಪರೀಕ್ಷಿಸಲು ಕೂಡ ಪದ್ಧತಿಯಿದೆ. ಕುದಿಸುವ ಸಮಯದಲ್ಲಿ ಅದರೊಂದಿಗೆ ಕೆಲವು ಭತ್ತದ ಕಾಳುಗಳನ್ನು ಹಾಕುತ್ತಾರೆ. ಬಣ್ಣ ಪೂರ್ತಿಯಾಗಿ ಕಾಂಡದಿಂದ ಹೊರ ಬಂದಾಗ ಭತ್ತದಿಂದ ಸಿಪ್ಪೆ ಬೇರ್ಪಟ್ಟು ನೀರಿನ ಮೇಲೆ ತೇಲತೊಡಗುತ್ತದೆ.

ಈ ಮರದ ಕಾಂಡವು ಹಳದಿ ಮಿಶ್ರಿತ ಕೆಂಪು ಬಣ್ಣವನ್ನು ಹೊಂದಿದ್ದು, ಹಲವಾರು ನೀರಿನಲ್ಲಿ ಕರಗುವ ಬಣ್ಣದ ರಾಸಾಯನಿಕಗಳಿಂದ ಕೂಡಿದ ಮಿಶ್ರಣವಾಗಿದೆ. ಬ್ರಾಜಿಲಿನ್, ಫೋಟೋಸಪ್ಪಾನಿನ್, ಸಪ್ಪಾನ್ ಚಾಲ್ಕೋನ್ ಮತ್ತು ಹೆಮಟೋ ಕ್ಯಾಯಿಲಿನ್‌ಗಳು ಪ್ರಮುಖ ರಾಸಾಯನಿಕಗಳಾಗಿವೆ. ಈ ಮರದ ಬಣ್ಣವನ್ನು ಸ್ಫಟಿಕ ದೊಂದಿಗೆ ಬೆರೆಸಿದಾಗ ಅದು ನೀರಿನಲ್ಲಿ ತೊಳೆದಾಗಲೂ ಹೋಗದ ಉತ್ತಮ ಬಣ್ಣವಾಗಿ ಮಾರ್ಪಡುತ್ತದೆ. ಈ ಬಣ್ಣದ ಆಮ್ಲತೆ ಅಥವಾ ಪ್ರತ್ಯಾಮ್ಲತೆಯನ್ನು ಹೆಚ್ಚು ಅಥವಾ ಕಡಿಮೆಗೊಳಿಸಿದಾಗ ವಿಧವಿಧದ ಬಣ್ಣಗಳನ್ನು ತಯಾರು ಮಾಡಬಹುದಾಗಿದೆ. ಕೆಲವೊಮ್ಮೆ ಸಸ್ಯ ಮೂಲದ ಇತರ ಬಣ್ಣಗಳನ್ನು ಬೆರೆಸಿ ಕೂಡ ಇದರ ಸತ್ವವನ್ನು ವೃದ್ಧಿಸಲಾಗುತ್ತದೆ.

ಈ ಮರದ ಬಣ್ಣವನ್ನು ಚರ್ಮ, ರೇಷ್ಮೆ, ಹತ್ತಿ, ಉಣ್ಣೆ, ತುಪ್ಪಳ, ಪೀಠೋಪಕರಣಗಳು, ಪಿಟೀಲುಗಳು, ನೆಲ ಹಾಸುಗೆಗಳು, ಗರಿಗಳು, ಔಷಧಿಗಳು, ಕರಕುಶಲ ವಸ್ತುಗಳು, ಮಕ್ಕಳ ಆಟಿಕೆಗಳು, ಮತ್ತಿತರ ವಸ್ತುಗಳಿಗೆ ಬಣ್ಣ ಹಾಕಲು ಬಳಸುತ್ತಾರೆ. ಬೂಟು ಪಾಲಿಷ್, ಶೃಂಗಾರ ಸಾಧನಗಳು, ಕೆಂಪು ಮಸಿ ಮತ್ತು ಆಹಾರ ವಸ್ತುಗಳ ತಯಾರಿಕೆಯಲ್ಲಿಯೂ ಉಪಯೋಗಿಸುತ್ತಾರೆ. ತಮಿಳು ನಾಡಿನ ತಿರುನೆಲ್ವೇಲಿ ಜಿಲ್ಲೆಯಲ್ಲಿ ಚಾಪೆ ಉದ್ಯಮದಲ್ಲಿ ಬಣ್ಣ ಹಾಕಲು ಬಳಸುತ್ತಾರೆ. ಈ ಜಿಲ್ಲೆಯ ಪತಾಮಡಾಯಿಯಲ್ಲಿ ತಯಾರಾಗುವ ರೇಷ್ಮೆ ಚಾಪೆಗಳು, ಮತ್ತಿತರ ಕರಕುಶಲ ವಸ್ತುಗಳು ಜಗತ್ತಿನಲ್ಲಿ ಅತಿ ಪ್ರಸಿದ್ಧವಾಗಿರುವುದು. ಅವುಗಳಿಗೆ ಹಾಕಿರುವ ಈ ಮರದ ಬಣ್ಣದಿಂದ, ಕೇರಳದ ಬಲರಾಮಪುರಂನ ಕೈಮಗ್ಗದ ಕೆಲಸಗಾರರು ಇಂದಿಗೂ ಈ ಮರದ ಬಣ್ಣವನ್ನು ಬಳಸುತ್ತಿದ್ದು ಏಜೆಂಟರ ಮೂಲಕ ಈ ಮರದ ಕಾಂಡವನ್ನು ಹೆಚ್ಚಿನ ಪ್ರಮಾಣದಲ್ಲಿ ಕೊಳ್ಳುತ್ತಿದ್ದಾರೆ. ಮಾಂಸ, ಬೀರ್, ವೈನ್, ಇತರ ಮದ್ಯಗಳು, ಇವುಗಳಿಗೆ ಬಣ್ಣ ಹಾಕಲೂ ಇದನ್ನು ಜಗತ್ತಿನುದ್ದಕ್ಕೂ ಉಪಯೋಗಿಸಲಾಗುತ್ತಿದೆ. ರೆಡ್ ವೈನ್‌ಗೆ 'ರೆಡ್' ಎಂಬ ಹೆಸರು ಮತ್ತು ಬಣ್ಣ ಬಂದುದು ಇದರಿಂದಲೇ. ಈ ಮರದ ಕಾಯಿಗಳಲ್ಲಿ 40 ಪ್ರತಿಶತಃ ಟ್ಯಾನಿನ್ ಅಂಶವಿದ್ದು, ಚರ್ಮ ಕೈಗಾರಿಕೆಗಳಲ್ಲಿ ಬಳಸಲು ಕಾರಣವಾಗಿದೆ. ಬೀಜಗಳಿಂದ ಕಿತ್ತಳೆ ಬಣ್ಣದ ಎಣ್ಣೆಯನ್ನು ತೆಗೆಯಬಹುದಾಗಿದೆ. ಬೇರುಗಳಿಂದ ಹಳದಿ ಬಣ್ಣವನ್ನು ಪಡೆದು ಉಪಯೋಗಿಸಲಾಗುತ್ತಿದೆ.





**ಎರಡು ಹೊಸ ರಾಷ್ಟ್ರಗಳ ಹುಟ್ಟಿನ ಮೂಲ :**

ನೇಯ್ದ, ವಸ್ತ್ರಗಳ ತಯಾರಿಕೆಯಲ್ಲಿ ಬಣ್ಣಗಳಾಗಿ ಪ್ರಾಚೀನ ಕಾಲದಿಂದಲೂ ಸಸ್ಯ ಮೂಲದ ಬಣ್ಣಗಳನ್ನೇ ಭಾರತ, ಚೀನಾ, ಜಪಾನ್ ಮುಂತಾದ ದೇಶಗಳಲ್ಲಿ ಬಳಸಲಾಗುತ್ತದೆ. ತನ್ನ ವಿಶಿಷ್ಟ ಕೆಂಪು ಬಣ್ಣಕ್ಕಾಗಿ 'ಸಪ್ಪಾನ್ ವುಡ್' ಆಗ ಅತ್ಯಂತ ಪ್ರಸಿದ್ಧವಾಗಿತ್ತು. ಕಾರಣ ಏಶಿಯಾ ಖಂಡದಿಂದ ಯುರೋಪಿಗೆ ಇದು ವಿಶೇಷವಾಗಿ ರಫ್ತಾಗುತ್ತಿತ್ತು.

ಇಂಗ್ಲೆಂಡಿನಲ್ಲಿ 15ನೆಯ ಶತಮಾನದಲ್ಲಿ ಕಪ್ಪು, ಹಳದಿ, ಕಂದು ಮತ್ತು ಬೂದು ಬಣ್ಣಗಳನ್ನು ಮಾತ್ರ ಹೇರಳವಾಗಿ ಉಪಯೋಗಿಸಲಾಗುತ್ತಿತ್ತು. ಕೆಂಪು ಮತ್ತು ನೇರಳೆ ಬಣ್ಣಗಳನ್ನು ಅಲ್ಲಿ ಅತಿ ಶ್ರೀಮಂತರ ವಸ್ತು ಮತ್ತು ಬಟ್ಟೆಗಳಲ್ಲಿ ಮಾತ್ರ ಬಳಸಲಾಗುತ್ತಿತ್ತು. ಕೊಲಂಬಸ್‌ನ ಅಮೆರಿಕೆಯ ಅನ್ವೇಷಣೆಯ ನಂತರ ಪೋರ್ಚುಗೀಸರು, ಬ್ರಿಟಿಷರು ಮತ್ತು ಫ್ರೆಂಚರು, ಭಾರತ ಮತ್ತು ಸುತ್ತಲಿನ ರಾಷ್ಟ್ರಗಳಲ್ಲಿ ಕೆಂಪು ಬಣ್ಣಕ್ಕಾಗಿ ಬಳಸುತ್ತಿದ್ದ 'ಸಪ್ಪಾನ್' ನಂತಹ ಮರ ಹುಡುಕುತ್ತ ವಿವಿಧ ರಾಷ್ಟ್ರಗಳ ಮೇಲೆ ದಾಳಿ ಮಾಡಿದರು. ಕ್ರಿ.ಶ. 1500ರಲ್ಲಿ ಪೋರ್ಚುಗೀಸರ ಹಡಗುಗಳು ದಕ್ಷಿಣ ಅಮೇರಿಕದ ಅಟ್ಲಾಂಟಿಕ್ ಭಾಗದಲ್ಲಿ 'ಸಪ್ಪಾನ್' ಮರದ ಗುಂಪಿಗೆ ಸೇರಿದ 'ಸಿಸಾಲ್ಪಿನಿಯಾ ಇಕಿನಟ' ಎಂಬ ಕೆಂಪು ಬಣ್ಣ ಕೊಡುವ ಮರವು ಹೇರಳವಾಗಿ ಬೆಳೆದುದನ್ನು ಪತ್ತೆ ಹಚ್ಚಿದರು. ಆ ಪ್ರದೇಶಕ್ಕೆ 'ಟೆರ್ರಾ ಡೆ ಬ್ರಾಜಿಲ್' ಮತ್ತು ನಂತರ 'ಬ್ರಾಜಿಲ್' ಎಂದು ಕರೆಯುತ್ತಿದ್ದುದ್ದೇ ಆ ಹೆಸರು ಬರಲು ಕಾರಣವಾಯಿತು. ವಜ್ರ, ವೈಡೂರ್ಯ ಮತ್ತು ಬಂಗಾರಗಳಿಂದ ತುಂಬಿದ ಹಡಗುಗಳಂತೆ 'ಬ್ರಾಜಿಲ್ ವುಡ್'ನಿಂದ ತುಂಬಿರುತ್ತಿದ್ದ ಪೋರ್ಚುಗೀಸ್‌ರ ಹಡಗುಗಳು ಕೂಡ ಸಮುದ್ರಗಳ್ಳರ ಲೂಟಿಗೆ ಆಗ ತುತ್ತಾದವು. ಹೀಗೆ ಹೊಸ ರಾಷ್ಟ್ರವೊಂದರ ಹುಟ್ಟಿಗೆ ಮತ್ತು ಯುರೋಪಿನಾದ್ಯಂತ ಕೆಂಪು ಬಣ್ಣದ ಬಳಕೆ ಹೆಚ್ಚಾಗಲು ಇದು ಕಾರಣವಾಯಿತು.

ಇದೇ ರೀತಿ ಕೆಂಪು ಬಣ್ಣ ಕೊಡುವ ಇನ್ನೊಂದು ಮರ 'ಹೆಮಾಟೋಕ್ಯಾಯಿಲಮ್ ಕಾಂಪೆಚಿಯಾನಮ್' ಹೇರಳವಾಗಿ ಕ್ಯಾರಿಬ್ಬಿಯನ್ ಸಮುದ್ರದ ದಂಡೆಯಲ್ಲಿ ಮಧ್ಯ ಅಮೆರಿಕಾದಲ್ಲಿ ಬೆಳೆದಿರುವುದನ್ನು ಬ್ರಿಟಿಷರು ಕ್ರಿ.ಶ. 1640ರಲ್ಲಿ ಪತ್ತೆ ಹಚ್ಚಿದರು. 'ಆ ದೇಶಕ್ಕೆ 'ಬೆಲಿಜೆ' ಎಂದು ಕರೆಯಲಾಯಿತು. ಹೀಗೆ 'ಸಪ್ಪಾನ್ ಮರ' ಎರಡು ಹೊಸ ರಾಷ್ಟ್ರಗಳ ಹುಟ್ಟಿಗೆ ಕಾರಣವಾಯಿತು.

**ಔಷಧೀಯ ಉಪಯೋಗಗಳು :**

ಆಯುರ್ವೇದದ ಪ್ರಕಾರ ಇದು ಕಹಿ, ಒಗರು, ಸಿಹಿ, ತಂಪು, ರಕ್ತವರ್ಧಕ ಗುಣಗಳನ್ನು ಹೊಂದಿದೆ. ಇದು ಪಿತ್ತ ಹೊಟ್ಟೆ ಹುಣ್ಣು, ಗಾಯ, ಚರ್ಮರೋಗಗಳು, ಕುಷ್ಠರೋಗ, ಅತಿಸಾರ, ಮಲರೋಗ, ಮಧುಮೇಹ, ಬಿಳಿಸೆರಗು, ಮುಂತಾದ ರೋಗಗಳಲ್ಲಿ ಉಪಯುಕ್ತ ಗುಣ ಹೊಂದಿದೆ. ಯುನಾನಿ ವೈದ್ಯ ಪದ್ಧತಿಯಲ್ಲಿಯೂ ಇದನ್ನು ಕಹಿ ಗುಣಗಳಿಗಾಗಿ, ಶ್ವಾಸಕೋಶದ ರಕ್ತಸ್ರಾವ ತಡೆಗಟ್ಟಲು, ಚರ್ಮದ ಹೊಳಪು ಹೆಚ್ಚಿಸಲು ಮತ್ತು ವಾತರೋಗ ತಡೆಗಟ್ಟಲು ಉಪಯೋಗಿಸಲಾಗುತ್ತಿದೆ. ಗರ್ಭಕೋಶಕ್ಕೆ ಹೆಚ್ಚಿನ ಸಾಮರ್ಥ್ಯ ಕೊಡುವ ಗುಣಗಳಿಗಾಗಿ ಇದನ್ನು ಭಾರತ, ಬ್ರೆಜಿಲ್, ಚೀನಾ ಮತ್ತಿತರ ದೇಶಗಳಲ್ಲಿ ಬಳಸಲಾಗುತ್ತಿದೆ. ಚೀನಾ ಮತ್ತು ಮಲೇಶಿಯಾಗಳಲ್ಲಿ ಮುಟ್ಟಿನ ತೊಂದರೆಗಳನ್ನು ಸರಿಪಡಿಸಲು ಉಪಯೋಗಿಸುತ್ತಾರೆ. ರಕ್ತಕ್ಕೆ ಉತ್ತಮ ಆರೋಗ್ಯ ಕೊಡುವ ಗುಣಕ್ಕಾಗಿ ಇದು ಜಗತ್ತಿನುದ್ದಕ್ಕೂ ಪ್ರಸಿದ್ಧಿಯಾಗಿದೆ.

ಚೀನಾದ ಸಾಂಪ್ರದಾಯಿಕ ವೈದ್ಯಕೀಯ ಪರಂಪರೆಯಲ್ಲಿ ವಿಕಿರಣ(ರೇಡಿಯೇಶನ್) ಗಳಿಂದ ಉಂಟಾಗುವ ದುಷ್ಪರಿಣಾಮಗಳನ್ನು ಹತ್ತಿಕ್ಕಲು ಮತ್ತು ಸೋಂಕು ರೋಗಗಳಿಂದ ಗುಣ ಹೊಂದಲು ಇದನ್ನು ಬಳಸಲಾಗುತ್ತಿದೆ. ರಷ್ಯಾದ ಚೆರ್ನೋಬೆಲ್ ಅಣು ವಿಕಿರಣ ದುರಂತ ಮತ್ತು ಜಪಾನಿನ ನಾಗಾಸಾಕಿ ಮತ್ತು ಹಿರೋಶಿಮಾಗಳಲ್ಲಿನ ಅಣುಬಾಂಬ್ ದುರಂತದ ನಂತರ ಜನರಲ್ಲಿ ಅಣು ವಿಕಿರಣದ ದುಷ್ಪರಿಣಾಮ ತಡೆಗಟ್ಟಲು ಇದನ್ನು ಬಳಸಲಾಯಿತು. ಭಾರತದಿಂದ ಇದನ್ನು ತರಿಸಿಕೊಳ್ಳಲಾಯಿತು. ಅದೇ ರೀತಿ ಸೂರ್ಯನ ಕಿರಣಗಳಲ್ಲಿನ ಅತಿನೇರಳೆಯ (ಅಲ್ಟ್ರಾ ವಯೋಲೆಟ್) ಕಿರಣಗಳು ನಮ್ಮ ದೇಹದ ಮೇಲೆ ಉಂಟು ಮಾಡುವ ಕೆಟ್ಟ ಪರಿಣಾಮಗಳನ್ನು ಕೂಡ ಇದು ತಡೆಯುತ್ತದೆ. ಈ ಮರದ ಕಾಂಡದ ಬಣ್ಣ ನೋವು ನಿವಾರಕ ಶಕ್ತಿಯನ್ನು ಹೊಂದಿದ್ದು ಅದನ್ನು ಮುಖಕ್ಕೆ ಹಚ್ಚುವ ಶೃಂಗಾರ ಸಾಧನಗಳಲ್ಲಿ ಬಳಸುತ್ತಾರೆ. ಈ ಸಾಧನಗಳು ಬೆಳಕು ಮತ್ತು ಉಷ್ಣಗಳಿಂದ ಮುಖವನ್ನು ರಕ್ಷಿಸುತ್ತದೆ ಮತ್ತು ಚರ್ಮದಲ್ಲಿ ಉರಿ ಉಂಟುಮಾಡುವುದಿಲ್ಲ.

ಮಲೇಶಿಯಾ ದೇಶದಲ್ಲಿ ಮಲೇರಿಯಾ ರೋಗದ ವಿರುದ್ಧ ಮತ್ತು ಫಿಲಿಪೈನ್ಸ್ ದ್ವೀಪದಲ್ಲಿ ರಕ್ತಕೊರತೆ ನೀಗಿಸಲು ಇದನ್ನು ಉಪಯೋಗಿಸುತ್ತಾರೆ. ನೋವು ನಿವಾರಕವಾಗಿ, ಉರಿತಶಮನಕ್ಕಾಗಿ, ರಕ್ತ ಹೆಪ್ಪುಗಟ್ಟುವುದನ್ನು ತಡೆಗಟ್ಟಲು ಮತ್ತು ಭ್ರಾಂತಿಗೊಳ್ಳುವ ಸ್ವಭಾವದವರೆಗೆ ಔಷಧಿಯಾಗಿ ಪೂರ್ವ ಏಶಿಯಾ ಖಂಡದ ರಾಷ್ಟ್ರಗಳಲ್ಲಿ ಇದನ್ನು ಬಳಸುತ್ತಾರೆ. ಜಾವಾ ದ್ವೀಪದಲ್ಲಿ ಬಳಸಲಾಗುವ 'ಜಾಮು' ಎಂಬ ಶಕ್ತಿವರ್ಧಕ ಸಸ್ಯ ಔಷಧೀಯ ತಯಾರಿಕೆಯಲ್ಲಿ ಈ ಮರದ ಎಲೆಗಳನ್ನು ಉಪಯೋಗಿಸುತ್ತಾರೆ. ಈ ಮರದ ಕಾಂಡದ ತುಣುಕೊಂದನ್ನು ನೀರಿಗೆ ಹಾಕಿ ಕುದಿಸಿ ದೊರೆಯುವ ಕೆಂಪು ಬಣ್ಣದ ನೀರನ್ನು ಹಲವಾರು ಶತಮಾನಗಳಿಂದ

ಕೇರಳದಲ್ಲಿ ದಾಹ ಕಡಿಮೆ ಮಾಡುವ, ರಕ್ತ ಶುದ್ಧೀಕರಣಗೊಳಿಸುವ, ಮಧುಮೇಹ ಗುಣಪಡಿಸುವ, ಚರ್ಮಕ್ಕೆ ಕಾಂತಿ ಕೊಡುವ, ಮತ್ತಿತರ ಗುಣಗಳಿಗಾಗಿ ಬಳಸಲಾಗುತ್ತಿದೆ. ಅತಿಸಾರ ರೋಗದಿಂದ ಬಳಲುವವರಿಗೆ ಶಕ್ತಿವರ್ಧಕವಾಗಿಯೂ ಈ ಮರದ ಕಾಂಡದ ನೀರಿನಲ್ಲಿ ಕರಗಿದ ಸತ್ವವನ್ನು ಬಳಸುತ್ತಾರೆ.

ಆಯುರ್ವೇದದ ಪ್ರಸಿದ್ಧ ಔಷಧಿಗಳಾದ ಉಸಿರಾಟವ, ಚಂದನಾಸವ, ದಶಮೂಲಾರಿಷ್ಠ, ಮೃತಸಂಜೀವನಿ ಸುರ, ಸರಿಬಾದ್ಯಾಪವಂ, ಕಲ್ಯಾಣಕ ಘೃತ, ಮಹಾಕಲ್ಯಾಣಕ ಘೃತ, ದಸಸ್ವರಸ ಘೃತ, ಸರ್ವ ಮಾಯಾಂತಕ ಘೃತ, ಬ್ರಹಚಗಲಾದಿ ಘೃತ, ದ್ರಾಕ್ಷಾದಿ ಕಷಾಯ, ಮಹಾತಿಕ್ತಶಂ ಕಷಾಯ, ತ್ರಿಪಳಾದಿ ತೈಲ, ಇರಿಮೇದಾದಿ ತೈಲ, ಬಾಲ ತೈಲ, ಪತ್ರಾಂಗಾಸವ, ಮುಂತಾದುವುಗಳ ತಯಾರಿಕೆಯಲ್ಲಿ ಈ ಮರದ ಕಾಂಡವನ್ನು ಉಪಯೋಗಿಸಲಾಗುತ್ತಿದೆ. ಗರ್ಭಕೋಶಕ್ಕೆ ಶಕ್ತಿ ಕೊಡುವ, ಇತರ ಗುಣಗಳನ್ನು ಹೊಂದಿದ 'ಲ್ಯೂಕಾಲ್' ಎಂಬ ಪ್ರಸಿದ್ಧ ಆಯುರ್ವೇದ ಔಷಧಿಯ ತಯಾರಿಕೆಯಲ್ಲಿಯೂ ಇದನ್ನು ಬಳಸಲಾಗುತ್ತಿದೆ. ಈ ಔಷಧಿಯನ್ನು ಬಿಳಿಸೆರಗು ರೋಗವನ್ನು ಗುಣಪಡಿಸಲು ಮತ್ತು ವಂಕಿಗಳ ಉಪಯೋಗದಿಂದ ಉಂಟಾಗುವ ರಕ್ತಸ್ರಾವವನ್ನು ತಪ್ಪಿಸಲೂ ಕೊಡಲಾಗುತ್ತಿದೆ.

ಆಯುರ್ವೇದೀಯ ಪ್ರಸಿದ್ಧ ಹಲ್ಲುಪುಡಿ ಮತ್ತು ಪೇಸ್ಟ್ 'ವೀಕೋ ವಜ್ರದಂತಿ'ಯ ತಯಾರಿಕೆಯಲ್ಲಿಯೂ ಇದನ್ನು ಉಪಯೋಗಿಸುತ್ತಾರೆ. ಇದು ಹೊಂದಿರುವ ಉಪಯುಕ್ತ ಔಷಧಿಯ ಗುಣಗಳಿಂದಾಗಿ ಇದು ವಸಡುಗಳಿಂದ ಉಂಟಾಗುವ ರಕ್ತಸ್ರಾವವನ್ನು ಕಡಿಮೆ ಮಾಡುತ್ತದೆ ಮತ್ತು ವಸಡುಗಳಿಗೆ ಶಕ್ತಿಯನ್ನು ಕೊಡುತ್ತದೆ.

**ಆಧುನಿಕ ಸಂಶೋಧನೆಗಳು :**

ಕಳೆದ ಎರಡು ದಶಕಗಳಿಂದ ಈ ಮರದ ಕಾಂಡದ ಕುರಿತು ಜಪಾನ್, ಚೀನಾ, ಕೋರೊಯಾ ಭಾರತ ಮುಂತಾದ ರಾಷ್ಟ್ರಗಳಲ್ಲಿ ನಡೆದ 80ಕ್ಕೂ ಹೆಚ್ಚು ಸಂಶೋಧನೆಗಳು ಅದರ ಅದ್ಭುತ ಔಷಧೀಯ ಗುಣಗಳ ಕುರಿತು ಪುರಾವೆ ಒದಗಿಸಿವೆ. ಜಗತ್ತಿನುದ್ದಕ್ಕೂ ಪ್ರಕಟಗೊಂಡ ಈ ಸಂಶೋಧನೆಗಳ ವಿವರಗಳಿಂದ ಇದು ಕ್ಯಾನ್ಸರ್ ನಿವಾರಕ, ಸೋಂಕು ನಿವಾರಕ, ಬ್ಯಾಕ್ಟೀರಿಯಾ ಮತ್ತು ಫಂಗೈ ನಾಶಕ, ವೈರಸ್ ನಿವಾರಕ, ಉರಿಯೂತ ಕಡಿಮೆಗೊಳಿಸುವ, ಮಧುಮೇಹ ಗುಣಪಡಿಸುವ, ಕರುಳನ್ನು ಬಲಪಡಿಸುವ, ದೇಹದ ರೋಗ ನಿರೋಧಕ ಶಕ್ತಿಯನ್ನು ಹೆಚ್ಚಿಸುವ, ಮತ್ತಿತರ ಅತ್ಯುಪಯುಕ್ತ ಗುಣಗಳನ್ನು ಹೊಂದಿರುವುದು ಬೆಳಕಿಗೆ ಬಂದಿದೆ.

ಟೈರೋಸಿನೇಸ್ ಎಂಬ ಕಿಣ್ವ(ಎನ್‌ಜೈಮ್)ವನ್ನು ಪ್ರಚೋದಿಸುವ ಮೂಲಕ ಇದು ಚರ್ಮದಲ್ಲಿ ಮೆಲಾನಿನ್‌ನ ಅಂಶವನ್ನು ಹೆಚ್ಚಿಸುವುದು ಗೊತ್ತಾಗಿದೆ. ಈ ಮೆಲಾನಿನ್ ಸೂರ್ಯನ ಅತಿನೇರಳೆ ಕಿರಣಗಳಿಂದ ನಮ್ಮ ದೇಹವನ್ನು ರಕ್ಷಿಸುವ ಮತ್ತು ಆಯಸ್ಸನ್ನು ವೃದ್ಧಿಸುವ ಶಕ್ತಿ ಹೊಂದಿದೆ. ಈ ಸಂಶೋಧನೆಗಳು ಚರ್ಮಕ್ಕೆ ಕಾಂತಿ ಕೊಡುವ ಇದರ ಪರಂಪರಾಗತ ಉಪಯೋಗವನ್ನು ದೃಢೀಕರಿಸಿವೆ.

ಇದು ಹೊಂದಿರುವ ಸಿಡುಬು ರೋಗದ ವಿರುದ್ಧ ಹೋರಾಡುವ, ರಕ್ತ ಹೆಪ್ಪುಗಟ್ಟುವುದನ್ನು ತಡೆಗಟ್ಟುವ, ಅಲರ್ಜಿಯನ್ನು ಗುಣಪಡಿಸುವ, ದೇಹದಲ್ಲಿನ ಕೊಲೆಸ್ಟಿರಾಲ್ ಅಂಶವನ್ನು ಕಡಿಮೆ ಮಾಡಿ ಹೃದಯ ತೊಂದರೆಗಳನ್ನು ನಿವಾರಿಸುವ ಗುಣಗಳು ಕೂಡ ಸಂಶೋಧನೆಗಳಿಂದ ಸಿದ್ಧಪಟ್ಟಿವೆ.

ಹೆಚ್ಚಿನ ಪ್ರಮಾಣದಲ್ಲಿ ಈ ಕಾಂಶದ ಸತ್ವವನ್ನು ನೀಡಿದಾಗ ಕೂಡ ಯಾವುದೇ ವಿಧದ ಕೆಟ್ಟ ಮತ್ತು ಅಡ್ಡ ಪರಿಣಾಮಗಳು ಉಂಟಾಗಿಲ್ಲ. ಹೀಗಾಗಿ ಇದೊಂದು ಅತ್ಯಂತ ಸುರಕ್ಷಿತ ಔಷಧಿಯಾಗಿದೆ.

**ಆ್ಯಂಟಿ ಆಕ್ಸಿಡೆಂಟ್ ಗುಣಗಳು :**

ನಮ್ಮ ಕಾಲೇನಿನ ಪ್ರಯೋಗಾಲಯಗಳಲ್ಲಿ ಸುಧೀರ ಮುರ್ಕೋಟ್ ನಡೆಸಿದ ಸಂಶೋಧನೆಗಳು ಈ ಕಾಂಡದ ಅದ್ಭುತ 'ಆ್ಯಂಟಿ ಆಕ್ಸಿಡೆಂಟ್' ಸಾಮರ್ಥ್ಯವನ್ನು ಬಹಿರಂಗಪಡಿಸಿದವು. ನಮ್ಮ ದೇಹದಲ್ಲಿ ವಿವಿಧ ಕಾರಣಗಳಿಂದಾಗು ಪ್ರತಿನಿತ್ಯ ಉತ್ಪತ್ತಿಯಾಗುವ ಸ್ವತಂತ್ರ ರ್‍ಯಾಡಿಕಲ್‌ಗಳು ದೇಹದ ಅಂಗಾಂಶ ಮತ್ತು ಜೀವಕೋಶಗಳನ್ನು ಹಾಳುಮಾಡಿ ಹಲವಾರು ಕಾಯಿಲೆಗಳಿಗೆ ಮೂಲ ಕಾರಣವಾಗಿರುವುದು ಸಂಶೋಧನೆಗಳಿಂದ ದೃಢಪಟ್ಟಿವೆ. ಅದೇ ರೀತಿ ನಮ್ಮ ಕೆಲವು ಆಹಾರ ವಸ್ತುಗಳು, ತರಕಾರಿಗಳು, ಹಣ್ಣುಗಳು, ಇವುಗಳಲ್ಲಿರುವ ಆ್ಯಂಟಿ ಆಕ್ಸಿಡಂಟ್‌ಗಳೆಂಬ ವಸ್ತುಗಳು ಈ ಸ್ವತಂತ್ರ ರ್‍ಯಾಡಿಕಲ್‌ಗಳನ್ನು ಹಾಳುಮಾಡಿ ಅವುಗಳಿಂದ ಉಂಟಾಗುವ ಕಾಯಿಲೆಗಳು ಬರದಂತೆ ನೋಡಿಕೊಳ್ಳುತ್ತವೆ. ಆ್ಯಂಟಿ ಆಕ್ಸಿಡೆಂಟ್‌ಗಳ ದಿನನಿತ್ಯದ ಉಪಯೋಗದಿಂದ ಸುಮಾರು ನೂರಕ್ಕೂ ಹೆಚ್ಚಿನ ಕಾಯಿಲೆಗಳನ್ನು ನಾವು ದೂರವಿಡಬಹುದಾಗಿದೆ. ಈ ಕಾಯಿಲೆಗಳಲ್ಲಿ ಕ್ಯಾನ್ಸರ್, ಮಧುಮೇಹ, ಅಲ್ಸರ್, ಅಸ್ತಮಾ, ಚರ್ಮ, ಕಣ್ಣೂ, ಮೂತ್ರಪಿಂಡ, ಮೆದುಳು, ಹೃದಯ, ಸಂಧು, ಕರುಳು ರೋಗಗಳು, ಆಲ್ಜೈಮರ್ ರೋಗ, ಲೆಪ್ರಸಿ, ಮುಂತಾದುವುಗಳು ಸೇರಿವೆ. ಆ್ಯಂಟಿ ಆಕ್ಸಿಡೆಂಟ್‌ಗಳು ರಕ್ತಶುದ್ಧೀಕರಣಗೊಳಿಸುವ ಮತ್ತು ಆಯಸ್ಸನ್ನು ಹೆಚ್ಚಿಸುವ ಸಾಮರ್ಥ್ಯ ಹೊಂದಿವೆ. ಸ್ವತಂತ್ರ ರ್‍ಯಾಡಿಕಲ್‌ಗಳಿಂದ ಉಂಟಾಗುವ ಕಾಯಿಲೆಗಳು ಐರೋಪ್ಯ ರಾಷ್ಟ್ರಗಳಲ್ಲಿ ಅತಿ ಹೆಚ್ಚಾಗಿದ್ದು ನಮ್ಮ ಪೂರ್ವಜರ ಆಹಾರ ಪದ್ಧತಿ, ನಮಗರಿವಿಲ್ಲದೆಯೇ ನಮ್ಮನ್ನು ಕಾಯಿಲೆಗಳಿಂದ ದೂರವಿರಿಸುತ್ತಿರುವುದು ಬೆಳಕಿಗೆ ಬಂದಿದೆ. 'ಸಪ್ಪಾನ್ ಕಾಂಡ' ಹೊಂದಿರುವ





ಅದ್ಭುತ ಆ್ಯಂಟಿ ಆಕ್ಸಿಡೆಂಟ್ ಶಕ್ತಿಯ ಕುರಿತ ಸುಧೀರ ನಡೆಸಿದ ಸಂಶೋಧನೆಗಳು ಜಪಾನಿನ ಪ್ರಸಿದ್ಧ ಆರೋಗ್ಯ ಸಂಶೋಧನಾ ಪತ್ರಿಕೆ 'ಬಯಾಲಾಜಿಕಲ್ ಆ್ಯಂಡ್ ಫಾರ್ಮಾಸ್ಯೂಟಿಕಲ್ ಬುಲೆಟಿನ್'ನಲ್ಲಿ ಪ್ರಕಟಗೊಂಡಿವೆ.

**ಹೆಚ್ಚಿದ ಬೇಡಿಕೆ :**

ಅಮೆರಿಕಾ ಮುಂತಾದ ಮುಂದುವರೆದ ರಾಷ್ಟ್ರಗಳ ಜನರು ತಮ್ಮ ನೀರು–ಹವೆ, ಆಹಾರಗಳ ಮೂಲಕ ಪ್ರತಿದಿನ 1–2 ಗ್ರಾಂ ರಾಸಾಯನಿಕ ವಿಷವಸ್ತುಗಳನ್ನು ಸೇವಿಸುತ್ತಿದ್ದಾರೆ. ಈ ವಿಷವಸ್ತುಗಳಿಂದಾಗಿ ಅವರ ಆರೋಗ್ಯ ವಿಪರೀತವಾಗಿ ಹದಗೆಡುತ್ತಿದೆ. ಕ್ಯಾನ್ಸರ್‌ನಿಂದ ಸಾಯುತ್ತಿರುವವರ ಸಂಖ್ಯೆ ಅಮೆರಿಕಾದಲ್ಲಿ ಪ್ರತಿಶತ 20 ದಾಟಿದೆ. ಕೇವಲ 1–2 ವರ್ಷ ವಯಸ್ಸಿನ ಹಸುಗೂಸುಗಳು ಕ್ಯಾನ್ಸರ್‌ನಿಂದ ನರಳುತ್ತಿವೆ. ಸಂತಾನಶತಿ ಹೀನತೆ, ಅಲರ್ಜಿ, ಮುಂತಾದವುಗಳೂ ಈ ಜನರನ್ನು ಅತಿಯಾಗಿ ಕಾಡುತ್ತಿವೆ. ಸದ್ಯ ಬಳಕೆಯಲ್ಲಿರುವ ರಾಸಾಯನಿಕ ಬಣ್ಣಗಳು ಈ ಮೇಲೆ ತಿಳಿಸಿದ ಎಲ್ಲ ಹಾನಿಕಾರಕ ಗುಣಗಳನ್ನು ಹೊಂದಿರುವುದು ಸಿದ್ಧಪಟ್ಟಿದೆ. ರಾಸಾಯನಿಕ ಬಣ್ಣಗಳಿಂದ ತಯಾರಿಸಿದ ಬಟ್ಟೆಗಳನ್ನು ತೊಟ್ಟುಕೊಂಡಾಗ ಉಂಟಾಗುವ ಮೈತುರಿಕೆ ಅಲರ್ಜಿಯಿಂದ ಮುಕ್ತವಾಗಲು ಹಳೆಯ ಟೆಕ್ನಾಲಜಿಗೆ ಭಾರತದತ್ತ ಗಮನ ಹರಿಸಿದಾಗ ಅವರ ನೆರವಿಗೆ ಬಂದುದು ಸಸ್ಯ ಮೂಲದ ಬಣ್ಣಗಳು. ಹೀಗಾಗಿ ಈಗ ಸಸ್ಯ ಮೂಲದ ಬಣ್ಣಗಳಿಗೆ ಪಾಶ್ಚಾತ್ಯ ರಾಷ್ಟ್ರಗಳಲ್ಲಿ ವಿಪರೀತ ಬೇಡಿಕೆ ಈ ರಾಷ್ಟ್ರಗಳಿಗೆ ಬಟ್ಟೆಗಳಿಗೆ ಬಣ್ಣವಾಗಿ ಬಳಸಲು 'ಸಪ್ಪಾನ ಕಾಂಡ' ಈಗ ರಪ್ತಾಗುತ್ತಿದೆ. ಬೇಡಿಕೆ ಹೆಚ್ಚಿದಂತೆಲ್ಲ ಬೆಲೆಯೂ ಹೆಚ್ಚಿ ಈಗ ಕಿ.ಗ್ರಾಂಗೆ 400/– ರೂಗೆ ತಲುಪಿದೆ. ಭಾರತದಲ್ಲಿಯೂ ಉಪಯೋಗ ಹೆಚ್ಚಿದಲ್ಲಿ ಬೆಲೆ ಇನ್ನೂ ಹೆಚ್ಚಬಹುದಾಗಿದೆ.

**ಇತರ ಉಪಯೋಗಗಳು:**

ಈ ಮೇಲೆ ತಿಳಿಸಿದ ಎಲ್ಲ ವಿವರಗಳಿಂದ ಕೇರಳದ ಸಾಂಪ್ರದಾಯಿಕ 'ಕೆಂಪು ಕುಡಿಯುವ ನೀರು', 'ಸಪ್ಪಾನ್ ಕಾಂಡ' ಅತ್ಯದ್ಭುತ, ಸುರಕ್ಷಿತ ಔಷಧಿಗಳ ಆಗರವಾಗಿದೆ. ಉಪಯುಕ್ತ ಬಣ್ಣವಾಗಿ ಇದನ್ನು ಔಷಧಿಗಳಲ್ಲಿ ಮತ್ತು ಆಹಾರ ವಸ್ತುಗಳಲ್ಲಿ ಬಳಸಬಹುದಾಗಿದೆ. ಈ ಬಣ್ಣವನ್ನು ಬೆಣ್ಣೆ, ತುಪ್ಪ, ಐಸ್‌ಕ್ರೀಂ, ದ್ರವ ಆಹಾರಗಳು, ಬಿಸ್ಕತ್‌ಗಳು, ಬ್ರೆಡ್ ಮತ್ತಿತರ ಬೇಕರಿ ವಸ್ತುಗಳು, ಸಿಹಿ ತಿಂಡಿಗಳು, ಮಾಂಸಾಹಾರ ಪದಾರ್ಥಗಳು, ಇವುಗಳಲ್ಲಿ ಉಪಯೋಗಿಸಬಹುದು. ಕೇರಳದಲ್ಲಿ ಈಗ ಬಳಕೆಯಲ್ಲಿರುವಂತೆ ಈ ಕಾಂಡದ ಕೆಂಪು ಕುಡಿಯುವ ನೀರನ್ನು ತುಟ್ಟಿ ಖನಿಜಯುಕ್ತ ನೀರಿಗೆ (ಮಿನರಲ್ ವಾಟರ್) ಬದಲಾಗಿ ಪ್ರಸಿದ್ಧಿಗೊಳಿಸಬಹುದಾಗಿದೆ. ಇದು ಹೊಂದಿರುವ ಆ್ಯಂಟಿ ಆಕ್ಸಿಡಂಟ್ ಗುಣಗಳು ಮತ್ತು ಕ್ಯಾನ್ಸರ್ ಮತ್ತಿತರ ರೋಗಗಳು ಬರದಂತೆ ಕಾಪಾಡುವ ಶಕ್ತಿಗಳು ಈ ಬಣ್ಣ ಹೊಂದಿರುವ ಆಹಾರ ವಸ್ತುಗಳತ್ತ ಜನರನ್ನು ಆಕರ್ಷಿಸಲು ಸಹಕಾರಿಯಾಗುತ್ತವೆ.

ಹೆಚ್ಚುತ್ತಿರುವ ವಾತಾವರಣದ ಉಷ್ಣತೆಯಿಂದಾಗಿ ಜನರ ದೇಹದ ಮೇಲೆ ಅತಿನೇರಳೆ ಕಿರಣಗಳು ಬೀರುವ ದುಷ್ಪರಿಣಾಮಗಳನ್ನು ಇದು ಸಮರ್ಥವಾಗಿ ತಡೆಯಬಲ್ಲದು. ಅಣುಶಕ್ತಿಯ ಬಳಕೆಯಾಗುವ ಕಾರ್ಖಾನೆಗಳ ಕೆಲಸಗಾರರು ಮತ್ತು ಉಪಗ್ರಹಗಳ ಕೆಲಸಗಾರರಲ್ಲಿ ಇದರ ಉಪಯೋಗ ಆರೋಗ್ಯದ ದೃಷ್ಟಿಯಿಂದ ಬಲು ಉಪಯುಕ್ತ. ಔಷಧೀಯ ಗುಣಗಳು ಕೂಡ ದೇಹಕ್ಕೆ ದೊರೆಯುತ್ತವೆ. ಕೇರಳದಲ್ಲಿ ವ್ಯಾಪಕವಾಗಿ ಬೆಳೆಯಲಾಗುತ್ತಿರುವ ಇದನ್ನು ಕರ್ನಾಟಕದ ಜನತೆಯೂ ಬೆಳೆದು ಲಾಭ ಗಳಿಸಲು, ಕುಡಿಯುವ ನೀರಿನಂತೆ ಬಳಸಿ ಉತ್ತಮ ಆರೋಗ್ಯ ಪಡೆಯಲು ಮತ್ತು ಈ ಮೂಲಕ ಪರಿಸರ ಸಂರಕ್ಷಣೆಯ ಕಾರ್ಯದಲ್ಲಿ ನಿರತವಾಗಲು ಇದು ಸಕಾಲ. □

## ಪ್ರಕೃತಿ ವೈದ್ಯ

### ಆಡು ಸೋಗೆ

ಪೊದರಿನ ರೂಪದಲ್ಲಿ, ಹೆಚ್ಚು ಮಳೆ ಬೀಳುವ ಪ್ರದೇಶಗಳಲ್ಲಿ ಆಡುಸೋಗೆಯ ಗಿಡ ಸಾಮಾನ್ಯವಾಗಿ ಬೆಳೆಯುತ್ತದೆ. ಅದರಿಂದ ಎಂಟು ಅಂಗುಲ ಬೆಳೆದ ಬಲಿತ ಕಾಂಡವನ್ನು ನೆಡುವುದರಿಂದ ಸಸ್ಯವನ್ನು ಪುನಃ ವೃದ್ಧಿಮಾಡಬಹುದು.

ಸಿಂಹಾಸ್ಯ, ಬಿಷಂಗ್ಮಾತಾ, ವಾಸಾ ಎಂಬ ವಿವಿಧ ನಾಮ ಹೊತ್ತ ಆಡುಸೋಗೆಯ ಎಲೆಯ ರಸವನ್ನು ದಮ್ಮು, ಕೆಮ್ಮು, ಗಂಟಲು, ಉರಿ, ಕಜ್ಜಿ, ತುರಿ, ಇಸಬು, ಬಾಯಿ–ಮೂಗಿನಿಂದ ಒಸರುವ ರಕ್ತವನ್ನು ನಿಲ್ಲಿಸುವುದಕ್ಕೆ ಪರಿಣಾಮಕಾರಿಯಾಗಿ ಬಳಸಬಹುದು.

ಬಿಸಿನೀರಿನಲ್ಲಿ ತೊಳೆದ ಆರೋಗ್ಯವಾದ ಎಲೆಗಳಿಂದ ರಸ ತೆಗೆಯಬೇಕು. ಎರಡು ಚಮಚ ರಸಕ್ಕೆ ಅಷ್ಟೇ ಪ್ರಮಾಣದ ಜೇನು ತುಪ್ಪ ಬೆರೆಸಿ, ದಿನಕ್ಕೆ ಮೂರು ಬಾರಿ ಆಹಾರ ಸೇವಿಸುವ ಮೊದಲು ಈ ಮಿಶ್ರಣವನ್ನು ಸೇವಿಸುವುದರಿಂದ ಕೆಮ್ಮು, ಗಂಟಲು ಉರಿ, ಒಣ ಕೆಮ್ಮು, ದಮ್ಮು ಕಡಿಮೆಯಾಗುತ್ತದೆ. ಹಸಿವು ಹೆಚ್ಚಾಗುವುದರೊಂದಿಗೆ, ಜ್ವರವಿದ್ದರೆ ಕಡಿಮೆಯಾಗುತ್ತದೆ. ಐದರಿಂದ ಹತ್ತು ವರ್ಷದ ಮಕ್ಕಳಿಗೆ ಒಂದು ಚಮಚ ರಸ– ಒಂದು ಚಮಚ ಜೇನುತುಪ್ಪದ ಮಿಶ್ರಣ ಕೊಡಬೇಕು. ಆರು ತಿಂಗಳಿನಿಂದ ಐದು ವರ್ಷದ ಮಕ್ಕಳಿಗೆ ಇದರ ಅರ್ಧದಷ್ಟು ಪ್ರಮಾಣದ ಮಿಶ್ರಣ ನೀಡಬೇಕು.

# ನಿಸರ್ಗೋಪಚಾರದಲ್ಲಿ ಸ್ನಾನದ ಸ್ಥಾನ

-ಜಿ.ವಿ.ವಿ. ಶಾಸ್ತ್ರಿ
'ನಿಸರ್ಗ ಯೋಗಧಾಮ' ನಂ. ೨/೨೦೫೯, ೧೧ನೇ ಕ್ರಾಸ್, ಎಸ್.ಎಸ್.ಪುರಂ, ತುಮಕೂರು -೫೭೨ ೧೦೨.

ಮಿತ್ರನು ಮನೆಗೆ ಬಂದರೆ ಮೊದಲ ಕೆಲಸವೇನು? ಹಿಂದೆ, ಅತಿಥಿ ಮನೆಗೆ ಬಂದರೆ ಅವನು ಕಾಲು ತೊಳೆಯಲು ನೀರು ಕೊಡುತ್ತಿದ್ದರು. ಈಗ ಅತಿಥಿ 'ಬೂಟು' ಕಾಲಿನಲ್ಲಿ ಬರಲು ಪ್ರಾರಂಭಿಸಿದ ಮೇಲೆ ಆ ಪದ್ಧತಿ ನಿಂತು ಹೋಗಿದೆ. ಆದರೆ ನಮ್ಮ ಮಿತ್ರನಾದ ರೋಗ ಬಂದ ಮೇಲೆ, ಹಿಂದು, ಮುಂದು, ಮುಂದೂ ನೀರಿನ ಉಪಚಾರವೇ ಆಗಬೇಕಲ್ಲದೆ ಬೇರೆ ವಿಧಿಯಿಲ್ಲ. ಸಾಮಾನ್ಯವಾಗಿ ತೀವ್ರಕಾಯಿಲೆಗಳಲ್ಲಿ ಸ್ನಾನ ಬೇಡ, ಶೀತವಾಗುತ್ತದೆ ಎಂಬುದೇ ಜನರ ನಂಬಿಕೆ. ಆದರೆ ಅದಕ್ಕೆ ವಿರುದ್ಧವಾದುದೇ ನಿಜವಾದ ನೈಸರ್ಗಿಕ ಮಾರ್ಗ. ಈಗ ಅಲೋಪತಿ ವೈದ್ಯ ವಿಜ್ಞಾನವೂ ಸಹ ತಣ್ಣೀರನ್ನು ಬಳಸುವಂತೆ ಹೇಳುತ್ತದೆ. ಸ್ನಾನಕ್ಕೆ ನೀರಿನ ಬಳಕೆಯ ವೈಜ್ಞಾನಿಕತೆ ಏನು?

**ಡಾ|| ಲಿಂಡ್ಲರ್‌ರವರ ಪ್ರಕಾರ ಜಲಚಿಕಿತ್ಸೆಯ ಉದ್ದೇಶಗಳು:**

1. ತೀವ್ರ ಕಾಯಿಲೆಗಳಲ್ಲಿ ನೋವು ಮತ್ತು ಶಾಖ ಇದ್ದೇ ಇರುತ್ತದೆ. ತೊಂದರೆಗೊಳಗಾದ ಭಾಗದಿಂದ ನೋವಿನ ನಿವಾರಣೆ ಮೊದಲ ಕರ್ತವ್ಯ. ನೋವಿಗೆ ಕಾರಣ, ರಕ್ತದ ತಡೆ. ನೀರು, ರಕ್ತವು ಸರಾಗವಾಗಿ ಹರಿಯಲು ಅನುವು ಮಾಡಿಕೊಟ್ಟು ಒತ್ತಡವನ್ನು ಕಡಿಮೆ ಮಾಡುತ್ತದೆ.
2. ಶಾಖದ ವಿಕಿರಣದಿಂದ(Radiation) ಶರೀರದ ಉಷ್ಣತೆಯನ್ನು ಅಪಾಯದ ಮಟ್ಟದಿಂದ ಕೆಳಕ್ಕೆ ತರುತ್ತದೆ.
3. ವಿಸರ್ಜನಾಂಗಗಳ ಕ್ರಿಯೆಯನ್ನು ತ್ವರಿತಗೊಳಿಸಿ ಕಶ್ಮಲಗಳನ್ನು ಬೇಗ ಹೆಚ್ಚು ಹೆಚ್ಚಾಗಿ ಹೊರಕ್ಕೆ ಹಾಕಲೂ ಸಹಾಯ ಮಾಡುತ್ತದೆ.
4. ಶರೀರದ ಧನವಿದ್ಯುತ್, ಅಯಸ್ಕಾಂತೀಯ ಶಕ್ತಿಯನ್ನು ಹೆಚ್ಚಿಸುತ್ತದೆ.
5. ಆಮ್ಲಜನಕವನ್ನು ಹೆಚ್ಚು ಕೊಟ್ಟು ಶರೀರದಲ್ಲಿನ ಕಶ್ಮಲವು ಉರಿಯಲು ಸಹಾಯ ಮಾಡುತ್ತದೆ.
6. ಶರೀರದ ಉಷ್ಣತೆಯನ್ನು ಸಮಾನವಾಗಿಡಲು ಪ್ರಯತ್ನಿಸುತ್ತದೆ. ಎಲ್ಲಾ ಹಳೆಯ ಕಾಯಿಲೆಗಳಲ್ಲಿಯೂ ಶರೀರದ ಶಾಖದ ಅಸಮತೋಲನೆ ಇದ್ದೇ ಇರುತ್ತದೆ. ರಕ್ತ ಚಲನೆ ಒಂದೇ ಸಮನಾಗಿಲ್ಲದಿರುವುದೇ ಇದಕ್ಕೆ ಕಾರಣ. ನೀರು, ಜೀವಶಕ್ತಿಯನ್ನು ಬಡಿದೆಬ್ಬಿಸಿ ಈ ಕೆಲಸವನ್ನು ಮಾಡಿಸುತ್ತದೆ.

**ದ್ವಿಪರಿಣಾಮ ಸೂತ್ರ :**

ಎಲ್ಲಾ ಕ್ರಿಯೆಗೂ ಒಂದು ಪ್ರತಿಕ್ರಿಯೆ ಉಂಟು. ಮೊದಲ ಪ್ರತಿಕ್ರಿಯೆ ತಾತ್ಕಾಲಿಕ, ನಂತರದ ಪ್ರತಿಕ್ರಿಯೆ ಶಾಶ್ವತ. ಡಾ|| ಲಿಂಡ್ಲರ್‌ರವರು ಈ 'ದ್ವಿಪರಿಣಾಮ ಸೂತ್ರ'ದ ಸಂಶೋಧಕರು. ಇದನ್ನು ಔಷಧಿ, ನೀರಿನ ಉಪಯೋಗ ಎಲ್ಲದರಲ್ಲೂ ಬಳಸಿದ್ದಾರೆ. ಯಾವ ಔಷಧಿ, ತಕ್ಷಣ ವಾಸಿ ಮಾಡಿ ಬಿಡುತ್ತದೋ ನಂತರದಲ್ಲಿ ಅದು ದುಷ್ಪರಿಣಾಮವನ್ನೇ ಉಂಟು ಮಾಡುತ್ತದೆನ್ನುವುದು ಅವರ ವಾದ.

ಈ ಸೂತ್ರಕ್ಕೆ ಮೂಲ ಚಿಂತನೆ, ಸರ್ ಐಸಾಕ್ ನ್ಯೂಟನ್ನಿನ ನಿಯಮಗಳು. ಎಲ್ಲಾ ಕ್ರಿಯೆಗೂ ಒಂದು ಪ್ರತಿಕ್ರಿಯೆ ಇರುತ್ತದೆ. ಅದು ಪರಸ್ಪರ ಸಮ ಹಾಗೂ ವಿರುದ್ಧ ದಿಕ್ಕಿನಲ್ಲಿರುತ್ತದೆ ಎನ್ನುವುದು. ಅಲ್ಲದೆ ಶಾಖದ ಗುಣವನ್ನೂ ಬಳಸಿಕೊಳ್ಳಲಾಯ್ತು. ಶಾಖವು, ಹೆಚ್ಚು ಇರುವ ಕಡೆಯಿಂದ ಕಡಿಮೆ ಶಾಖವಿರುವ ಕಡೆಗೆ ಹರಿಯುತ್ತದೆ ಎಂಬ ನಿಯಮವನ್ನು ಅನುಸರಿಸಿ ತಣ್ಣೀರು ಹಾಗೂ ಬಿಸಿನೀರಿನ ಪರಿಣಾಮಗಳನ್ನು ವಿವರಿಸಿದ್ದಾರೆ.

**ಶರೀರದ ಮೇಲೆ ಬಿಸಿನೀರಿನ ಪರಿಣಾಮ:**

ಬಿಸಿನೀರು ಚರ್ಮದ ಮೇಲೆ ಬಿದ್ದೊಡನೆಯೇ ಚರ್ಮದ ಮೇಲ್ಪದರದಲ್ಲಿ ಶಾಖ ಹೆಚ್ಚುತ್ತದೆ. ಒಳಪದರದಲ್ಲಿ ಶಾಖ ಕಡಿಮೆ ಇರುತ್ತದೆ. ಹೆಚ್ಚಿನ ಶಾಖ ಅಲ್ಲಿಗೆ ನುಗ್ಗಲು ಪ್ರಯತ್ನಿಸುತ್ತದೆ. ಅದರೊಂದಿಗೆ ರಕ್ತವೂ ಕೂಡ. ಮೊದಲ ಪರಿಣಾಮ ಶರೀರದ ಮೇಲ್ಪದರದಲ್ಲಿ ಶಾಖ ಹೆಚ್ಚುವಿಕೆ, ಎರಡನೆಯ ಪರಿಣಾಮ ಶಾಖ ಕಡಿಮೆಯಾಗುವಿಕೆ, ದ್ವಿಪರಿಣಾಮ ಸೂತ್ರದಂತೆ ಮೊದಲ ಪರಿಣಾಮ ಅಂದರೆ ಹೆಚ್ಚು ಶಾಖ ತಾತ್ಕಾಲಿಕ, ಎರಡನೆಯ ಪರಿಣಾಮವಾದ ಮೇಲ್ಪದರದಲ್ಲಿ ಶಾಖ ಕಡಿಮೆಯಾಗುವಿಕೆ ಶಾಶ್ವತ. ಆದ್ದರಿಂದಲೇ ಬಿಸಿನೀರಿನ ಸ್ನಾನವು ಮುಗಿದ ನಂತರ ಚಳಿಯಾಗುತ್ತದೆ. ಬಿಸಿ, ಹೆಚ್ಚು ಬಿಸಿ, ಹೀಗೆ ಬಿಸಿನೀರನ್ನು ಬಯಸುತ್ತಲೇ ಇರುತ್ತದೆ. ಇದೇ ಕಾರಣದಿಂದಲೇ ಮಕ್ಕಳನ್ನು, ಅದೂ ಚಳಿಗಾಲದಲ್ಲಿ ಬಿಸಿನೀರಿನ ಸ್ನಾನಕ್ಕೆ ಇಳಿಸಿದರೆ ಬಾಯ್ಲರ್ ನೀರು ಪೂರ್ಣ ಮುಗಿದಿರುತ್ತದೆ! ಆದರೂ ಕಡೆಯಲ್ಲಿ ನಡುಕ.

-ಮುಂದುವರೆಯುತ್ತದೆ.



ಹರಳೂರಿನಲ್ಲಿ ಏರ್ಪಡಿಸಿದ್ದ ಗುರುವಂದನೆ ಹಾಗೂ ವಿವಿಧ ಅಭಿವೃದ್ಧಿ ಕಾಮಗಾರಿಗಳ ಉದ್ಘಾಟನಾ ಸಮಾರಂಭವನ್ನು ಪೂಜ್ಯ ಶ್ರೀಗಳವರು ಉದ್ಘಾಟಿಸಿದರು. ವೇದಿಕೆಯಲ್ಲಿ ದೇಗುಲಮಠದ ಶ್ರೀಗಳು, ಸಂಸದ ಶ್ರೀ ಎಸ್. ಮಲ್ಲಿಕಾರ್ಜುನಯ್ಯ, ಶಾಸಕ ಶ್ರೀ ಬಿ. ಸುರೇಶ್‌ಗೌಡ, ಜಿಲ್ಲಾಧಿಕಾರಿ ಡಾ. ಸಿ. ಸೋಮಶೇಖರ್ ಮುಂತಾದವರು



ದಾಬಸ್‌ಪೇಟೆಯಲ್ಲಿ ಮೈಸೂರು ಬ್ಯಾಂಕಿನ ನೂತನ ಶಾಖೆಯನ್ನು ಪೂಜ್ಯ ಶ್ರೀಗಳವರು ಲೋಕಾರ್ಪಣೆ ಮಾಡಿದರು. ಈ ಸಂದರ್ಭದಲ್ಲಿ ಬ್ಯಾಂಕಿನ ಅಧಿಕಾರಿಗಳಾದ ಶ್ರೀ ಕೆ.ಟಿ. ಮಂಜುನಾಥ್, ಶ್ರೀ ಗಂಜಿಹಾಳ, ಶ್ರೀ ಕೊಪ್ಪಲ ನಾಗರಾಜ್, ಶ್ರೀ ವೆಂಕಟೇಶ್ ಹಾಗೂ ಬ್ಯಾಂಕಿನ ಸಿಬ್ಬಂದಿ ವರ್ಗದವರು ಉಪಸ್ಥಿತರಿದ್ದರು




ತುಮಕೂರು ರೋಟರಿ ಅವರು ಏರ್ಪಡಿಸಿದ್ಧ ಸಮಾರಂಭದಲ್ಲಿ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರು ಸುವರ್ಣ ಮಹೋತ್ಸವ ನೆನಹಿನ ಸಂಚಿಕೆಯನ್ನು ಲೋಕಾರ್ಪಣೆ ಮಾಡಿದರು. ಈ ಸಂದರ್ಭದಲ್ಲಿ ರೋಟರಿ ಪದಾಧಿಕಾರಿಗಳು ಉಪಸ್ಥಿತರಿದ್ದರು.




ಶ್ರೀ ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯದಲ್ಲಿ ಏರ್ಪಡಿಸಿದ್ದ ಬಸವ ಜಯಂತಿ ಮತ್ತು ಗುರುವಂದನೆ ಕಾರ್ಯಕ್ರಮವನ್ನು ಪೂಜ್ಯ ಶ್ರೀಗಳವರು ಉದ್ಘಾಟಿಸಿದರು. ವೇದಿಕೆಯಲ್ಲಿ ಬೇಲಿಮಠದ ಶ್ರೀ ಶ್ರೀ ಶಿವರುದ್ರ ಮಹಾಸ್ವಾಮಿಗಳು ಹಾಗೂ ಕಾಲೇಜಿನ ಪದಾಧಿಕಾರಿಗಳು



ಸೆಂಚುರೇಸ್-೨೦೦೮ ಅಂತರರಾಷ್ಟ್ರೀಯ ಕಲಾ ಕಾರ್ಯಾಗಾರದಲ್ಲಿ ಭಾಗವಹಿಸಿದ್ದ ವಿದೇಶಿ ಪ್ರತಿನಿಧಿಗಳು ಶ್ರೀಮಠಕ್ಕೆ ಭೇಟಿ ನೀಡಿ ಪೂಜ್ಯ ಶ್ರೀಗಳವರ ದರ್ಶನಾಶೀರ್ವಾದ ಪಡೆದರು.



ಸಂಚುರೇಸ್-೨೦೦೮ ಅಂತರರಾಷ್ಟ್ರೀಯ ಕಲಾ ಕಾರ್ಯಾಗಾರವನ್ನು ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಎಸ್.ಐ.ಟಿ. ನಿರ್ದೇಶಕರಾದ ಡಾ. ಎಂ.ಎನ್. ಚನ್ನಬಸಪ್ಪ, ಶತಾವಧಾನಿ ಡಾ. ಆರ್. ಗಣೇಶ್, ಪ್ರಾಂಶುಪಾಲರಾದ ಡಾ. ಎಸ್.ಎಂ. ಶಶಿಧರ್, ಶ್ರೀಮತಿ ತನುಜಾ ಮೊದಲಾದವರು ಉಪಸ್ಥಿತರಿದ್ದರು